ಬೆಲೆ: ಎರಡು ಆಣೆ

# ಕರ್ಮವೀರ

ಸಂಪಾದಕರು :
ಹ. ರಾ. ಪುರೋಹಿತ ಎಂ. ಎ.

——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——

Editor :
H. R. Purohit, M. A.



---( ಸಂಪುಟ ೧೯ )--- ಹುಬ್ಬಳ್ಳಿ ಸೋಮವಾರ ತಾರೀಖು ೭---೭---೧೯೪೭ ---( ಸಂಚಿಕೆ ೧೪ )---

# ಜಗತ್ತಿನ ಮುಖ್ಯ ಸಂಸ್ಕೃತಿಗಳೆರಡರಲ್ಲಿಯ ತಾರತಮ್ಯ

## ಜನಾಂಗಗಳ ಮಾನಸಿಕ ಪ್ರವೃತ್ತಿಭೇದ— ಅದರಿಂದ ರೂಪಿಸಲ್ಪಡುವ ಸಂಸ್ಕೃತಿ— ಆಚಾರ ವಿಚಾರಗಳಲ್ಲಿಯ ಐಕ್ಯ ಮತ್ತು ಅಂತರ— ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಪರಸ್ಪರ ವಿರುದ್ಧ ದೃಷ್ಟಿ

ಅಣುಬಾಂಬಿನ ಈ ಯುಗದಲ್ಲಿ ಪಾಶ್ಚಾತ್ಯರ ದೃಷ್ಟಿ ಬಲಪ್ರಯೋಗದಲ್ಲಿ ಶ್ರದ್ಧೆಯಿಟ್ಟಿದೆ. ತಾತ್ವಿಕತೆಯ ಬೆಂಬಲವಿಲ್ಲದ ವಿಜ್ಞಾನ ಅವರ ದಯಾದೃಷ್ಟಿಯನ್ನು ಸಹ ವಿಲಕ್ಷಣವಾಗಿ ಮಾಡಿದೆ. ಪೌರ್ವಾತ್ಯ ಸಂಸ್ಕೃತಿಯ ಮೂಲಸೂತ್ರವಾದ "ಆತ್ಮವತ್ ಸರ್ವಭೂತಾನಿ" ಯೆಂಬುದನ್ನು ಪಾಶ್ಚಾತ್ಯರು ಅಳವಡಿಸಿಕೊಂಡಾರೆಂಬುದು ದುರಾಶೆ—ಹೀಗೆಂದು ಕರ್ನಾಟಕದ ಸುಪ್ರಸಿದ್ಧ ಲೇಖಕರಾದ ಪಂ. ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯ ಪಡುತ್ತಾರೆ.

ಪ್ರಪಂಚದೊಳಗೆ ಹಲವು ಜನಾಂಗಗಳಿವೆ. ಇದು ಒಂದು ಜನಾಂಗ, ಇದು ಇನ್ನೊಂದು ಎಂದು ವಿಂಗಡಿಸಿ ತೋರುವವುಗಳೆಂದರೆ, ಅವುಗಳೊಳಗೆ ಸ್ವಭಾವತಃ ಅಡಕವಾಗಿ, ಮಾತಿನಲ್ಲಿ ಮಿರುಗಿ, ಕಾರ್ಯದಲ್ಲಿ ಕಾಣಿಸುವ ಅಂತರಂಗಿಕ ಚೈತನ್ಯ ಶಕ್ತಿಗಳು. ಅವುಗಳನ್ನೇ 'ಸಂಸ್ಕೃತಿ' ಎನ್ನುವುದು. ಹೀಗೆ ಜನಾಂಗಭೇದಕಗಳಾದ ಸಂಸ್ಕೃತಿಗಳು ವಿಶೇಷವಾಗಿ ಹಲವಿರುವುದರಿಂದ ಜನಾಂಗಗಳೂ ಹಲವಿವೆ ಎಂಬಲ್ಲಿ ಸಂದೇಹವಿಲ್ಲ. ಅದರೂ 'ಪಾಶ್ಚಾತ್ಯ ಜನಾಂಗ—ಪೌರ್ವಾತ್ಯ ಜನಾಂಗ' ಎಂದು ಸಾಮಾನ್ಯವಾಗಿ ಇಡಿ ಜನಾಂಗವನ್ನು ಎರಡಾಗಿ ಬಲ್ಲವರು ವಿಭಾಗಿಸಿದ್ದಾರೆ. ಬದಲಾಗಿ— ಅಥವಾ ಇನ್ನೊಂದು ರೀತಿಯಾಗಿ— 'ಔತ್ತರೇಯ ಜನಾಂಗ— ದಾಕ್ಷಿಣಾತ್ಯ ಜನಾಂಗ' ಎಂದು ವಿಭಾಗಿಸಿಲ್ಲ. ಹಿಂದಿನವರು ಆಗಿನ ಕಾಲ ದೇಶಗಳನ್ನೊಂದಿದ ಜನಾಂಗಗಳ ಪ್ರಾಮುಖ್ಯ-ಮಾನಸಿಕ ಪ್ರವೃತ್ತಿಗಳಿಗನುವಾಗಿ ಹಾಗೆ ಭೇದಿಸಿರಬೇಕೆಂದು ತೋರುತ್ತಿದೆ. ಇಂದಿನವರಾದರೆ ಔತ್ತರೇಯರಾದ ಟ್ಯೂಟನರದು. ಅದೊಂದು ವಿಶಿಷ್ಟಪ್ರವೃತ್ತಿಯನ್ನು ಪರಾಂಬರಿಸಿ, ಮೇಲೆ ಸೂಚಿಸಿದ ಇನ್ನೊಂದು ಭೇದವನ್ನೂ ಕಲ್ಪಿಸುತ್ತಿದ್ದರೋ ಏನೋ ? ಇರಲಿ, ಈ ಭೇದವೆಂದರೆ ಆತ್ಯಾಧುನಿಕವಾದುದು. ಇದರ ಸ್ಥಾಯಿತ್ವವಿನ್ನೂ ಪೂರ್ಣವಾಗಿ ಬೇರು ಬಿಟ್ಟು ನೆಲೆಗೊಳ್ಳದ ಕಾರಣ ಆ ಹಿಂದಣ ಭೇದವನ್ನೇ ಮುಂದಿರಿಸಿ ವಿವೇಚಿಸುವ.

### ' ಸಂಸ್ಕೃತಿ ' ಎಂದರೇನು ?

ನಮ್ಮ ಸಂಸ್ಕೃತಿ ಎಂಬ ಪದಕ್ಕೆ ಸಮಾನಾರ್ಥಕವಾದ ಇಂಗ್ಲಿಷ ಪದವೆಂದರೆ 'ಕಲ್ಚರ್' ( Culture ) ಎಂದು ಹೇಳುತ್ತಾರೆ. ಅಥವಾ ಮಾರ್ಗದ ಕಲಾ-ಶಾಸ್ತ್ರ-ಲೋಕವ್ಯವಹಾರಾದಿಗಳಲ್ಲಿ ಪರಿಪಾಕವನ್ನೊಂದಿದ ಮನಃಪ್ರವೃತ್ತಿಗೇ ಆ ಹೆಸರು. ಯಾವ ಜನಾಂಗದಲ್ಲಾದರೂ ಸರಿಯೇ; ಅಂಥ ಮೇಲುಮಟ್ಟದ ಸಂಸ್ಕೃತಿಯುಳ್ಳವರೇ ಜನಾಂಗನಾಯಕರೆನ್ನಿಸುತ್ತಾರೆ; ಅಲ್ಲದೆ ನಾಯಕ ಪದವಿಗೆ ಅರ್ಹರಲ್ಲದು ತ್ತಾರೆ. ಹೀಗಿರುವಲ್ಲಿ ಇಂಥ ನಾಯಕರೆಂದರೆ ಬರಿಯ ತಂತಮ್ಮ ದೇಶ— ಜನಾಂಗಗಳಷ್ಟೇ ಅಲ್ಲ; ಇಡಿ ಪ್ರಪಂಚವೇ ಒಗ್ಗಟ್ಟಾಗಬೇಕು; ಯಾವದೇ ಇತರ ದೇಶಜನಾಂಗಗಳಿಗೂ ಅವುಗಳು ತಮಗಿಂತ ಅಬಲಗಳಾಗಿರಲಿ, ಪ್ರಬಲಗಳಾಗಿರಲಿ— ಅಶಾಂತಿಯಾಗದಂತೆ ಎಲ್ಲವೂ ಏಳಿಗೆಗೊಳ್ಳಬೇಕು; ಎಂದು ಭಾವಿಸಿ ಅದಕ್ಕನುವಾಗಿ ಕಾರ್ಯವೆಸಗುವವರು ಎಂದು ಅರ್ಥವಾಗುತ್ತಿದೆ. ನಮ್ಮ ಪೌರ್ವಾತ್ಯ ಜನಾಂಗ ಸಂಸ್ಕೃತಿಯ ಸ್ವರೂಪವೆಂದರೆ 'ತನ್ನಂತೆ ಪರರನ್ನು ಭಾವಿಸುವುದು' ಎಂದು ಸಂಗ್ರಹವಾಗಿ ಹೇಳಬಹುದು. 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ' ಎಂಬ ಗೀತಾ ವಚನವು ಅದನ್ನೇ ಅಂದವಾಗಿ ಮಾತ್ರವಲ್ಲ, ವಿಶಿಷ್ಟ ಅರ್ಥಗರ್ಭಿತವಾಗಿ ಹಿಂದಿನ ಹೇಳಿಕೆಯನ್ನು ಮುಂದಿಸುತ್ತಿದೆ. ಅದರೊಳಗಿನ 'ಸರ್ವಭೂತಾನಿ' ( ಎಲ್ಲ ಜೀವಿಗಳನ್ನು ) ಎಂಬ ಪದವೇ ಅದಕ್ಕೆ ಅಷ್ಟು ವಿಶಿಷ್ಟ ಅರ್ಥಗರ್ಭಿತತ್ವವನ್ನೊದಗಿಸುತ್ತಿದೆ. ತನ್ನಂತಿರುವ ಮಾನವರನ್ನು ಮಾತ್ರವೆ ಸ್ವಸಮಾನರನ್ನಾಗಿ ಕಂಡರೆ ಸಾಲದು; ತನ್ನಂತೆ ಸುಖದುಃಖಭಾಜನವಾದ ಸ್ಥಾವರ-ಜಂಗಮ ಪ್ರಾಣಿವರ್ಗವನ್ನೆಲ್ಲ ಹೇಗೆಯೇ ಕಂಡು ವರ್ತಿಸು

ವದಲ್ಲಿಯೇ ಮಾನವತೆ ಸಾರ್ಥಕವಾಗುವುದು ಎಂದು ಅದರ ತಾತ್ಪರ್ಯ. ಹಾಗಿಲ್ಲದವರೆಲ್ಲ ಸಂಸ್ಕೃತಿರಾಹಿತ್ಯದಿಂದ ಅಲ್ಲವೆ ಅಪೂರ್ಣ ಸಂಸ್ಕೃತಿಯಿಂದಾಗಿ ಬರಿಯ ಮಾನವರೂಪಿಗಳು ಅಥವಾ ಮಾನವತೆಯ ಮಟ್ಟವನ್ನೇರದವರು ಎಂದು ಅರ್ಥವಾಗುತ್ತಿದೆ. ಈ ಭಾವನಾಸಾರವನ್ನೇ ಮಹಾತ್ಮರು ಕಳೆದ ಏಶ್ಯಜನಾಂಗ ಸಂಘದ ತಮ್ಮ ಭಾಷಣದಲ್ಲಿ ಸೂಚಿಸಿದರು.

### ಪಾಶ್ಚಾತ್ಯರಲ್ಲಿ ತತ್ವ ಮತ್ತು ಅದರ ಆಚರಣೆ

ಮಹಾತ್ಮರ ಸಂದೇಶವನ್ನು ಪಾಶ್ಚಾತ್ಯ ದೇಶದ ಹಲವು ಪತ್ರಿಕೆಗಳು ಬಹಳವಾಗಿ ಹೊಗಳಿದುದೇನೋ ನಿಜ. ಆದರೆ ಕಾರ್ಯತಃ ಆಚಾರಕ್ಕಿಳಿಯದ ಹೊಗಳಿಕೆ ಎಂದರೆ ಮುಡಿಮೊಳೆಯದ ಹೂ, ಅಥವಾ ಹುಚ್ಚು ಹೂ. ಪರಜನಾಂಗಗಳಿಂದ ತಮಗೊದಗಬೇಕಾದ ತಾತ್ಕಾಲಿಕ ಕಾರ್ಯದ ಸಾಧನೆಗಾಗಿ ಹಾಗೆ ಹೊಗಳಿಕೆಯ ಬಣ್ಣವನ್ನು ಬಳಿವವರೂ ಹಲವರಿದ್ದಾರೆ. ಈ ಲೇಖನದ ಮುಮ್ಮಾತಾಗಿ ಇಷ್ಟೆಲ್ಲ ಹೇಳಬೇಕಾಗಿ ಬಂದುದು ತಿರಸ್ಕಾರಣವಲ್ಲ. ನಮ್ಮ ಪೌರ್ವಾತ್ಯ ದೇಶಗಳ ಜೀವನದ ಗುರಿ ಏನೆಂಬುದು ಪಾಶ್ಚಾತ್ಯ ರಾಷ್ಟ್ರಗಳಿಗೆ ಈಗಲಾದರೂ ಸರಿಯಾಗಿ ಮನದಟ್ಟಾಗಿರಬಹುದು. ಆದರೆ ಪಾಶ್ಚಾತ್ಯ ರಾಷ್ಟ್ರಗಳ ಜೀವನಕಾರ್ಯದ ಗುರಿ ಏನೆಂಬುದು ಇನ್ನೂ ಸರಿಯಾಗಿ ಗೊತ್ತಾದಂತೆ ತೋರುವುದಿಲ್ಲ. ಶ್ರೀ ಪೋಪ ದೊರೆಗಳ ಅಲ್ಲವೆ ಅವರಂಥವರ ಹೇಳಿಕೆಗಳಲ್ಲಿ ಹೊಳೆವ ಅಂಶಗಳೇನೋ ನಮಗೆ ಹೊಸತಾದುವಲ್ಲ. ಆ ಧರ್ಮದ ಮೂಲಪುರುಷನಾದ ಕ್ರಿಸ್ತನು ಪೌರ್ವಾತ್ಯ ಮಹಾಪುರುಷರೊಳಗೆ ಒಬ್ಬನಾದುದರಿಂದ ಸಾಮಾನ್ಯವಾಗಿ ಆ ಧರ್ಮಮಾರ್ಗವೂ ನಮ್ಮದರೊಡನೆ ಹೋಲುತ್ತಿದೆ. ಆದರೆ ಅಂಥವರ ಭಾವನೆಗಳೆಲ್ಲ ಈಗಿನ ಪಾಶ್ಚಾತ್ಯ ಕ್ರಿಶ್ಚನ್ ರಾಷ್ಟ್ರಗಳಲ್ಲಿ ಕಾರ್ಯರೂಪವಾಗಿ ಮಾರ್ಪಾಡುತ್ತಿವೆಯೆ ? ರಾಷ್ಟ್ರಗಳಲ್ಲಿ ಧಾರ್ಮಿಕ ಚೈತನ್ಯವನ್ನು ತುಂಬಿಸುವ ವಿಚಾರವು ಬಂದೊಡನೆ ರಾಜನೀತಿ ತಲೆಯಿಕ್ಕಬೇಕಾಗುತ್ತದೆ. ಹಾಗೆ ತಲೆಯಿಕ್ಕಿದೊಡನೆ ಆ ಪಾಶ್ಚಾತ್ಯ ರಾಷ್ಟ್ರನಾಯಕರೆಂಬವರ ಮಂತ್ರಾಧಿಕಾರಗಳೇ ಅವರ ಮೇಲೆ ಸುತ್ತಿಸುಳಿವುದು. ಕಳೆದ ಎರಡು ಮಹಾಯುದ್ಧಗಳು ಕೊನೆಗೊಂಡುವಷ್ಟೆ. ಅವುಗಳ ಪರಿಣಾಮವಾಗಿ ಈ ನಾಯಕರ ಅಧಿಕಾರವೇ ಪಾಶ್ಚಾತ್ಯ ದೇಶಗಳ ಸುತ್ತಲೂ ಉರುಳಾಗಿ ಬಲಿಯುತ್ತಿವೆ. ಧಾರ್ಮಿಕ ವಿಷಯಗಳಲ್ಲಿ ಉಪನ್ಯಾಸ ಕೊಡಬೇಕಾದಲ್ಲಿ ಇವರು ಎಲ್ಲರಿಗಿಂತಲೂ ಅಧಿಕವಾಗಿ ಅಂದವಾಗಿ ಮುಂದೆ ಬರುತ್ತಾರೆ. ಆದರೆ ರಾಜಕೀಯ ಸಾಮಾಜಿಕ ರಂಗಗಳಲ್ಲಿ ತಮಗೇನಾದರೂ ಇಷ್ಟಷ್ಟು ತೊಂದರೆ ಸಮೀಪಿಸಿತೆಂದರೆ ಇವರ ಧಾರ್ಮಿಕೋದ್ದೇಶವೆಲ್ಲವೂ ಗಾಳಿಯುಗಟಾಗಿ ತೋರುತ್ತಿದೆ. ಅದರ ಒಂದು ಬಲವಾದ ನಿದರ್ಶನವೆಂದರೆ ಕಳೆದ ಯುದ್ಧಾಂತದಲ್ಲಿ ತೋರಿಸಿದ ಅಣುಬಾಂಬಿನ ಪ್ರದರ್ಶನವು. ಆ ಅಣುಬಾಂಬನ್ನು ತಯಾರಿಸುವ ವಿಜ್ಞಾನ ಸಂಸ್ಕೃತಿ ಪಾರಂಗತರ ಉದ್ದೇಶವೇನೋ ಅದರ ಲೋಕೋಪಕಾರ ಶಕ್ತಿಯ ಪ್ರದರ್ಶನವಿರಬಹುದು. ಆದರೆ ಅದರ ಹಕ್ಕೆಲ್ಲ ಈ ನಾಯಕರೆಂಬವರ ಬೀಗದ ಪೆಟ್ಟಿಗೆಯೊಳಗೆ ಅದರಿಂದಲೇ ಮಿತ್ರರಾಷ್ಟ್ರಸಂಘದೊಳಗೆ ಇಷ್ಟೊಂದು ವೈಮನಸ್ಯ.

ಈ ಸಂದರ್ಭದಲ್ಲಿ ಈ ಲೇಖನವನ್ನು ಬರೆಯಲಿಕ್ಕೆ ಪ್ರೋತ್ಸಾಹಕವಾದ ಇನ್ನೊಂದು ಸಂಗತಿಯನ್ನು ಸೂಚಿಸಬೇಕಾಗಿದೆ. ಕಳೆದ ಜೂನ್ ೧೦ ನೇ ತಾರೀಖಿನ ಹಿಂದೂ ಪತ್ರಿಕೆಯಲ್ಲಿ ಶ್ರೀ 'ಮಾನ್ಸನ್ ಕ್ಲಾರ್ಕ' (Manson Clarke) ಎಂಬವರು ಬರೆದ ಲೇಖನದ ತಾತ್ಪರ್ಯವನ್ನು ಪರಾಂಬರಿಸಿರಿ— "ಅಮೇರಿಕದಲ್ಲೀಗ" ಯುತೆನೇಸಿಯ-ಸೊಸೈಟಿ (Euthanasia Society) ಎಂಬ ಸಂಘವೊಂದು ಸ್ಥಾಪಿತವಾಗಿದೆ. ಪ್ರಾಯ ಮಿತಿಮೀರಿ ಎರಿ ಅಥವಾ ಅಸಾಧ್ಯ ರೋಗದಿಂದಾಗಿ ಜೀವನವೇ ಹೊರೆಯಾಗಿ, ತಮ್ಮ ಜೀವನವನ್ನು ಸಾಗಿಸಲಾರದ ವ್ಯಕ್ತಿಗಳೆಂದರೆ ಸಮಾಜ ರಾಷ್ಟ್ರಗಳಿಗೆ ವ್ಯಥಾಭಾರವಲ್ಲವೆ ? ಒಂದಿಲ್ಲ ಒಂದು ದಿನದಲ್ಲಿ ವ್ಯಕ್ತಿ ಸಾಯಲೇಬೇಕು. ಅದರಿಂದ ಲೋಕಹಿತಾರ್ಥವಾಗಿ ಅಂಥವರನ್ನು ಯಾವ ಬಗೆಯ ನೋವೂ ಇಲ್ಲದಂತೆ ತೀರಿಸಿಬಿಡುವುದೇ ಕರ್ತವ್ಯ ಎಂದು ಕೆಲವಂದಿ ವಿಜ್ಞಾನಪ್ರವೀಣರಾದ ಡಾಕ್ಟರರಿಗೆ ತೋರಿತು. ಇದೊಂದು ವಿಶಿಷ್ಟ ಕಾರ್ಯವನ್ನು 'ಕನಿಕರದ ವಧೆ' ( Mercy Killing) ಎಂದು ಕರೆಯುತ್ತಾರಂತೆ. ಮಾತ್ರವಲ್ಲ, ಅಮೇರಿಕದ ಡಾಕ್ಟರ್ ಮಹಾಶಯರೊಬ್ಬರು ತಾನು ಕನಿಕರದಿಂದ ಒಬ್ಬ ದೀರ್ಘರೋಗಿಯಾದವನ ಪ್ರಾಣವನ್ನು, ಏನೇನೂ ನೋವಿಗೆಡೆಯಾಗದಂತೆ ತೆಗೆದನು" ಎಂಬುದನ್ನು ಬಹಿರಂಗವಾಗಿ ಹೇಳಿದರಂತೆ. ಅಮೇರಿಕ-ಇಂಗ್ಲಂಡುಗಳಲ್ಲಿ ಈ ಕಾರ್ಯವನ್ನು ನ್ಯಾಯಬದ್ಧವಾಗಿ ಮಾಡಬೇಕೆಂದು ಪಾರ್ಲಿಮೆಂಟುಗಳಲ್ಲಿ ಮಸೂದೆಗಳೂ ಬಂದಿದ್ದುವು. ಆದರೆ ಅದು ಪಾಸಾಗಲಿಲ್ಲ; ಉಳಿದ ಸಭೆಗಳಲ್ಲೂ ಪಾಸಾಗಲಿಲ್ಲ. ಮುಂದೇನಾಗುವುದೋ ನೋಡಬೇಕು.

ಈ ಲೇಖನವನ್ನೋದಿ ನನಗಂತೂ ನೀರಿನೊಳಗೆ ಕಂದೆರೆದಂತಾಯಿತು. ಕರುಣಾಮೂಲಿ, ನಿಷ್ಕರುಣವಾಗಲಿ—ಕೊಲೆ ಎಂದರೆ ಕೊಲೆಯೇ ಅಲ್ಲವೆ ? ಹೆಸರುಗೊಂಡ ಹಲವಂದಿ ಡಾಕ್ಟರರಿಗೂ ಅಸಾಧ್ಯವೆಂದು ತೋರಿದ ಎಷ್ಟೋ ರೋಗಗಳು ಮೂಲಿಕೆ ಮದ್ದಿನಿಂದ— ಅಥವಾ ಕಾಲಾಂತರದಲ್ಲಿ ತಾವಾಗಿಯೇ ವಾಸಿಯಾದುದಕ್ಕೆ ಹಲವು ದೃಷ್ಟಾಂತಗಳನ್ನು ಕೊಡಬಹುದು; ಕಾಣಬಹುದು. ಅದಿರಲಿ; ಮಿತಿಮೀರಿ ವಯಸ್ಸಾದ ಮುದುಕನಾಗಿರಲಿ, ಅಂಗವಿಕಲತೆಯಿಂದಾಗಿ ಜೀವಿಕೆಯಲ್ಲಿ ಮಾತ್ರ ಪರಾವಲಂಬಿಯಾಗಿರಲಿ— ಅಂಥ ವ್ಯಕ್ತಿಗಳಲ್ಲಿ ಹಲವರು ತಂತಮ್ಮ ಮನೆಗಳಿಗೂ ಸಮಾಜಗಳಿಗೂ ಸದ್ಬೋಧನೆಯಿಂದ ಮಾರ್ಗದರ್ಶಿಗಳಾಗಿರುವುದಕ್ಕೆ ನಿದರ್ಶನಗಳು ಹಲವುಂಟು. ಕೊಲೆ ಮಾಡಿದವನಿಗೆ, ತಪ್ಪು ಖಚಿತವಾದಲ್ಲಿ ಮರಣದಂಡನೆಯನ್ನೊದಗಿಸುವ ನ್ಯಾಯಸಿದ್ಧ ಕ್ರಮವನ್ನೂ ತಿದ್ದಿ ತೆಗೆಯಬೇಕೆಂದು ಹಲವಂದಿ ಧಾರ್ಮಿಕರು ಸೂಚಿಸುತ್ತಾರೆ. ಹಾಗಿರುವಲ್ಲಿ ಅಂಥ ತಪ್ಪೇನೂ ಇಲ್ಲದೆ, ಸಮಾಜಕ್ಕೆ ಆರ್ಥಿಕಭಾರ ಕಾರಣವಾಗುತ್ತವೆ, ಎಂದು ಒಬ್ಬನನ್ನು ಕೊಂದುಬಿಡುವ ಈ ಧರ್ಮಶಾಸ್ತ್ರಕ್ಕೆ ಯಾವ ಋಷಿಮೂಲ ಕಾರಣನೋ ಗೊತ್ತಾಗುವುದಿಲ್ಲ. ಬಾಹ್ಯದಲ್ಲಿ ಕ್ರೈಸ್ತಮತೀಯ ವೇಷವನ್ನು ಧರಿಸಿದರೂ ಸಾಮಾಜಿಕ-ರಾಜಕೀಯ ರಂಗದಲ್ಲಿ ಈ ನಾಯಕರೆಂಬವರು ಆ ಮಹಾಶಯನ ತತ್ವವನ್ನು ಲೇಶವಾದರೂ ಅನುಕರಿಸುವುದಿಲ್ಲ ಎಂದು ಭಾವಿಸಬೇಕಾಗಿದೆ.

### ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ದೃಷ್ಟಿಭೇದ

ಪರಾಂಬರಿಸಿರಿ.... ಪೌರ್ವಾತ್ಯ ನಾಗರಿಕತೆ ಎಂದರೆ ತಾತ್ವಿಕ ಜ್ಞಾನಮಾರ್ಗಕ್ಕನುವಾಗಿ ಪ್ರಾಕೃತಿಕ ವಿಜ್ಞಾನ ಮಾರ್ಗವನ್ನನುಸರಿಸುವವರು. ಮಹಾತ್ಮಾ ಗಾಂಧಿಯವರಂಥ ತಾತ್ವಿಕರ ಮಾತು ಹಾಗಿರಲಿ. ಪಾಶ್ಚಾತ್ಯ ವಿಜ್ಞಾನಿಗಳಾದರೂ ಕೈ. ವಾಸಿ ಜಗದೀಶಚಂದ್ರ ಬೋಸರನ್ನೂ ಈಗಲೂ ಜೀವಂತರಾಗಿರುವ ಶ್ರೀ ಸಿ ವಿ ರಾಮನ್ ಮೊದಲಾದ ಹಿಂದೀ ಮಹನೀಯರನ್ನೂ ವಿಜ್ಞಾನಿಗಳೆಂದು ಒಪ್ಪಲೇಬೇಕಷ್ಟೆ. ಅವರ ಅಲ್ಲಲ್ಲಿಯ ಲೇಖನ ಭಾಷಣಗಳನ್ನು ಅವಲೋಕಿಸಿರಿ. ಅವರ ಮಾತುಗಳಲ್ಲಿ ಈ 'ಯುತನೇಶಿಯ' ದಂಥ ಅನುಕೂಲ್ಯ ಸಂಪಾದನೆಯ ಭಾವನೆಗಾದರೂ ಎಡೆ ಇಲ್ಲ. ಅದರಿಂದ ಪಾಶ್ಚಾತ್ಯವಿಜ್ಞಾನಿಗಳ ಈ ಭಾವನೆಯೆಂದರೆ, ಅವರ ಪ್ರಾಕೃತಿಕ ಸ್ಥಿತಿ, ತಾತ್ವಿಕ ಜ್ಞಾನರಹಿತವಾದ ವಿಜ್ಞಾನ ಸಂಸ್ಕೃತಿ ಇವುಗಳಿಗನುವಾಗಿ ಬೇರೂರಿತೆಂದು ಭಾವಿಸಬೇಕಾಗಿದೆ. ಅಂಥವರಲ್ಲಿ, ತಾತ್ವಿಕವಾಗಿರುವ ಪ್ರತಿಯೊಂದು ಜೀವ[ಆತ್ಮ]ಗಳ ಮಹತ್ವ. ಶರೀರದಲ್ಲಿರುವ ಆ ಜೀವಗಳನ್ನು-ಎಂದರೆ ಮನುಷ್ಯಾದಿ ಜೀವಿಗಳನ್ನು ಅನ್ಯೋನ್ಯವಾಗಿ ಸಂಯೋಜಿಸುವ ಅಂತರಿಕ ಚೈತನ್ಯ ಶಕ್ತಿ [ದಯೆ— ದಮ— ದಾನ—ತಪಃಶೀಲ] ಯ ಸ್ಫುರಣೆ ಸ್ವಾಭಾವಿಕವಾಗಿ ಇಲ್ಲವೆಂದೇ ತೋರುತ್ತಿದೆ. ಹಾಗಲ್ಲದಿದ್ದರೆ, ನಿಗ್ರೋ ಜನರನ್ನು ತಾವೆಣಿಸುವ ಅತ್ಯಲ್ಪ ದೋಷಕ್ಕಾಗಿ ಅಸಹ್ಯ ಮರಣಹಿಂಸೆಗೆ ಗುರಿಮಾಡುವ, ಅಣುಬಾಂಬಿನಿಂದ ಅನವಧಿ— ನಿರ್ದೋಷ ಜಪಾನಿ ನಗರವಾಸಿಗಳನ್ನು ನಿರ್ಮೂಲನವೆಸಗುವ ಕಡೆಯದಾಗಿ ಮೇಲೆ ಹೇಳಿದಂತೆ 'ಯುತೇನೇಶಿಯ' ದಿಂದ ನಿಷ್ಪಾಪಿ ಜನರಿಗೆ ಸ್ವರ್ಗಪ್ರಾಪ್ತಿಯೆಸಗಬೇಕೆನ್ನುವ ಭಾವನೆಯಾದರೂ ಹೇಗೆ ಬರಬೇಕು ?

ಇದನ್ನು ಆಲೋಚಿಸುವಲ್ಲಿ ಕೈ. ವಾಸಿಗಳಾದ 'ರುಡಿಯರ್ಡ ಕಿಪ್ಲಿಂಗ್' ಎಂಬ ಕವಿಗಳ ಮುಂದಿನ ಮಾತು ನೆನಪಾಗುತ್ತಿದೆ—

ಮೂಡಲು ಮೂಡಲೆ ಪಡುವಲು ಪಡುವಲೆ
ಅವಳಿಯದೆಂದೂ ಸಲ್ಲದು "ಒಡಲೆ"

"ಪ್ರಕೃತಿದೇವಿಯ ಬಸುರಿನಲ್ಲಿ ಪೌರ್ವಾತ್ಯ ದೇಶ, ಪಾಶ್ಚಾತ್ಯ ದೇಶಗಳೆಂಬ ಅವಳಿ ಮಕ್ಕಳು ಜನಿಸಿದುವು. ಸಾಮಾನ್ಯವಾಗಿ ನೋಡಿದರೆ ಅವಳಿ ಮಕ್ಕಳೊಳಗೆ ಬಾಹ್ಯಾಂತರಂಗ ಸಾದೃಶ್ಯ— ನಿಕಟಪ್ರೇಮಗಳು ಕಂಡು ಬರುತ್ತಿವೆ. ಆದರೆ, ಈ ಅವಳಿಗಳೊಳಗೆ (ಎಂದರೆ ಎರಡೂ ಭೂಭಾಗಗಳಲ್ಲಿ ಅವುಗಳ ಸಮಾಜಗಳಲ್ಲಿ) ಅವುಗಳಿಲ್ಲವೇ ಇಲ್ಲ. ಅದರಿಂದ ಅವುಗಳು ಎಂದೂ ಸಂಘಟಿತವಾಗವು"

—೧೩ನೇ ಪುಟಕ್ಕೆ

# ಕರ್ನಾಟಕದ ಪ್ರಮುಖ ಬಂದರಿನ ವಿವಾದ

## ಭಟ್ಕಳ ಮತ್ತು ಮಂಗಳೂರಿನ ಅರ್ಹತೆಗಳು

ಕೆಲವು ವಾರಗಳ ಹಿಂದೆ ಬಂದರ ಸಮಿತಿಯ ಸಭೆ ಮುಂಬಯಿಯಲ್ಲಿ ಜರುಗಿದಾಗ ಮದರಾಸ ಸರಕಾರದ ಪರವಾಗಿ ಅದರಲ್ಲಿ ಭಾಗವಹಿಸಿದ ಶ್ರೀ ಕೆ. ಆರ್. ಕಾರಂತ ಮೊದಲಾದವರು ಕರ್ನಾಟಕಕ್ಕಾಗಿ ಯಾವ ಬಂದರನ್ನು ಅಭಿವೃದ್ಧಿಗೊಳಿಸಬೇಕೆಂಬ ವಿಷಯದಲ್ಲಿ ಕೆಲವು ಸೂಚನೆಗಳನ್ನು ಮಾಡಿದರೆಂದು ತಿಳಿಯುತ್ತದೆ. ಕರ್ನಾಟಕದ ಪ್ರಮುಖ ಬಂದರಾಗಲು ಭಟ್ಕಳದ ಯೋಗ್ಯತೆಯನ್ನು ಅಲ್ಲಗಳೆದು ಮಂಗಳೂರಿಗೆ ಆ ಮಾನ ದೊರೆಯಬೇಕೆಂದು ಅವರು ಪ್ರತಿಪಾದಿಸಿದರೆಂದು ಹೇಳಲಾಗಿದೆ. ದ. ಕ. ವಣಿಕ್ಸಂಘದವರು ಮಂಗಳೂರು ಅಥವಾ ಮಲ್ಪೆಯೇ ಪ್ರಮುಖ ಬಂದರಾಗಿ ರೂಪಿಸಲ್ಪಡಬೇಕೆಂದು ಒಂದು ಮನವಿಯನ್ನು ಸಿದ್ಧಗೊಳಿಸಿದ್ದಾರೆ. ಪ್ರಮುಖ ಬಂದರಿನ ಸ್ಥಾನಕ್ಕೆ ದ. ಕನ್ನಡ ಉ. ಕನ್ನಡಗಳಲ್ಲಿ ನಡೆದ ಸ್ಪರ್ಧೆಯ ಎರಡೂ ಪಕ್ಷಗಳ ಸಮರ್ಥಕರ ವಿಚಾರಗಳನ್ನು ಈ ಕೆಳಗೆ ಸಂಗ್ರಹಿಸಿ ಕೊಡಲಾಗಿದೆ.

### ದಕ್ಷಿಣ ಕನ್ನಡದ ಪ್ರತಿಪಾದನೆ

(ದ. ಕ. ವಣಿಕ್ಸಂಘದವರ ವಿಚಾರಗಳು)

ಮಂಗಳೂರು ಕೊಚ್ಚಿಯಿಂದ ೨೦೬, ಮಾರ್ಮುಗೋವೆಯಿಂದ ೧೫೪ ಮೈಲುಗಳ ಅಂತರದಲ್ಲಿದೆ. ಎಸ್. ಐ. ಆರ್. ರೈಲ್ವೆಯ ಕೊನೆಯ ನಿಲ್ದಾಣವೂ ಇದಾಗಿದೆ. ಮೈಸೂರು ಕೊಡಗುಗಳಿಗೆ ಇಲ್ಲಿಂದ ಮೋಟಾರು ಸಾರಿಗೆಯ ವ್ಯವಸ್ಥೆಯಿದೆ. ೨ ನದಿಗಳ ಸಂಗಮಸ್ಥಲದಲ್ಲಿರುವುದರಿಂದ ಬಂದರು ಮಾಡಲು ಸಾಕಷ್ಟು ನೀರುಳ್ಳದ್ದಾಗಿದೆ.

ಭಟ್ಕಳವು ಅಭಿವೃದ್ಧಿ ಮಾಡಲು ಯೋಗ್ಯವಾಗಿದ್ದರೂ ಒಳ ಪ್ರದೇಶಗಳಿಗೆ ಸಾರಿಗೆ ಸೌಕರ್ಯವಿಲ್ಲ. ಭಟ್ಕಳ ಒಂದು ಚಿಕ್ಕ ಬೆಸ್ತರಹಳ್ಳಿ; ಹತ್ತಿರದಲ್ಲಿ ಯಾವ ಪೇಟೆ ಪಟ್ಟಣಗಳೂ ಇಲ್ಲ. ಹಾಗೆ ನೋಡಿದರೆ ಮಲ್ಪೆಯೇ ಭಟ್ಕಳಕ್ಕಿಂತ ಉತ್ತಮ; ಹತ್ತಿರ ಜನನಿಬಿಡವಾದ ಊರುಗಳಿವೆ.

ಮಂಗಳೂರು ಮೈಸೂರುಗಳ ಕಡೆಯ ವ್ಯಾಪಾರವನ್ನು ಆ ಕಡೆ ಸಾಗಿಸದಿದ್ದರೆ ಭಟ್ಕಳವು ಹೆಚ್ಚು ಉಪಯುಕ್ತವಾಗದು. ಇದರಿಂದ ಮದ್ರಾಸು ಬಂದರಿನ ಉತ್ಪತ್ತಿಗೆ ಹಾನಿಯಿದೆ; ಮಂಗಳೂರು ಸಂಪೂರ್ಣ ಖಾಲಿಯಾಗುವುದು. ಇದು ದೊಡ್ಡ ನಷ್ಟವೇ ಸರಿ.

೧ ಲಕ್ಷ ಜನಸಂಖ್ಯೆಯ ಮಂಗಳೂರು ಪಟ್ಟಣ ವರ್ಧಮಾನ ವ್ಯಾಪಾರ ಕೇಂದ್ರ. ಹತ್ತಿರದಲ್ಲಿ ಜನನಿಬಿಡವಾದ ಪೇಟೆ ಪಟ್ಟಣಗಳಿವೆ. ಕ. ಕನ್ನಡ, ಮೈಸೂರು, ಕೊಡಗುಗಳ ಸರಕುಗಳ ನಿರ್ಯಾತಕ್ಕೆ ಇದು ಹೆದ್ದಾರಿಯು.

ಮಂಗಳೂರು ಮುಖ್ಯ ಬಂದರಾದರೆ ಈ ವರೆಗೆ ಮಲ್ಪೆಯಿಂದ ತಲಚೇರಿಯವರೆಗೆ ಹಂಚಿಹೋದ ಪಶ್ಚಿಮಘಟ್ಟದ ಉತ್ಪತ್ತಿಗಳು ನೇರವಾಗಿ ಮಂಗಳೂರಿಗೇ ಬರುವಂತಾಗುವವು. ಇದರಲ್ಲಿ ಶ್ರಮ, ಅಪಾಯ, ಖರ್ಚು ಎಲ್ಲವೂ ಕಡಿಮೆಯಾಗುವುವು. ಮಂಗಳೂರು ಕೇವಲ ವ್ಯಾಪಾರಕೇಂದ್ರವಲ್ಲ; ಇಲ್ಲಿ ಕೈಗಾರಿಕೆಯ ಕಾರಖಾನೆಗಳೂ ಶಿಕ್ಷಣ ಸಂಸ್ಥೆಗಳೂ ಇವೆ. ಕರ್ನಾಟಕ ಪ್ರಾಂತ ವಾದರೆ ಮುಖ್ಯ ನಗರವಾಗಲು ಆಗ ಮಂಗಳೂರಿಗೆ ಹೆಚ್ಚಿನ ಅರ್ಹತೆಯುಂಟಾಗುತ್ತದೆ.

ಭಟ್ಕಳವನ್ನು ಮೈಸೂರು ರೈಲ್ವೆಗಲ್ಲದೆ ಬೇರೆ ಸೇರಿಸಲು ಸಾಧ್ಯವಿಲ್ಲ. ಮಂಗಳೂರಿಂದ ಎಸ್. ಐ. ಆರ್. ರೈಲಿಗೂ ಹುಬ್ಬಳ್ಳಿಯಿಂದ ಎಂ. ಎಸ್. ಎಂ. ರೈಲಿಗೂ ಸೇರಿಸುವದೆಂದರೆ ಬಹಳ ಕಷ್ಟದ ಸಂಗತಿ.

ಮಂಗಳೂರನ್ನು ಕಡೂರಿನೊಂದಿಗೆ ರೈಲಿನ ಮೂಲಕ ಜೋಡಿಸಿದರೆ ಮೈಸೂರು, ಹುಬ್ಬಳ್ಳಿ, ಪುಣೆ ಮತ್ತು ಮುಂಬಯಿಗಳ ಕಡೆಯಿಂದ ಹೆಚ್ಚಿನ ಆಯಾತನಿರ್ಯಾತಗಳನ್ನು ಸೆಳೆಯಬಹುದು. ಕ್ರಮೇಣ ಕಾರ್ಕಳದ ಮೂಲಕ ಉಡುಪಿ ಮಲ್ಪೆಗಳನ್ನು ಸೇರಿಸಬಹುದು.

ಪಶ್ಚಿಮ ಕರಾವಳಿಯಲ್ಲಿ ಕರಾಚಿಯಿಂದ ಕೊಚ್ಚಿಯವರೆಗಿರುವ ಎಲ್ಲ ಪ್ರಮುಖ ಬಂದರುಗಳೂ ಪರಸ್ಪರ ಸಾಧಾರಣ ೨೦೦ ಮೈಲುಗಳ ಅಂತರದಲ್ಲಿವೆ; ಮಂಗಳೂರು ಕೊಚ್ಚಿಯಿಂದ ೨೦೦ ಮೈಲುಗಳ ಮತ್ತು ಮಾರ್ಮುಗೋವೆಯಿಂದ ೧೫೪ ಮೈಲುಗಳ ಅಂತರದಲ್ಲಿದೆ. ಭಟ್ಕಳ ಬಂದರು ಮಾರ್ಮುಗೋವೆಗೆ ತೀರ ಸಮೀಪವಾಗಿದ್ದು ಕೊಚ್ಚಿಗೆ ಅತಿದೂರದಲ್ಲಿದೆ. ಇದರಿಂದ ಬಂದರುಗಳ ಮಹತ್ವದಲ್ಲಿ ವಿಪರ್ಯಾಸ ಉಂಟಾಗುತ್ತದೆ.

ಭಟ್ಕಳವನ್ನಾಗಲಿ ಮಲ್ಪೆಯನ್ನಾಗಲಿ ದೊಡ್ಡ ಬಂದರವನ್ನಾಗಿ ಮಾಡಲ್ಯಾರುಮಾರು ೩ ರಿಂದ ೪ ಕೋಟಿಗಳವರೆಗೆ ಖರ್ಚು ಬೀಳಬಹುದು. ಮಂಗಳೂರಿನ ಹತ್ತಿರದಲ್ಲಿ ಬ್ಲಾಕ ಬಂಡೆಗಳಿಲ್ಲ. ಗುರುಪುರ ನದಿಯು ಹೊಳೆ ತೋಡಬೇಕಾದ ಪ್ರಸಂಗ ಬಿದ್ದರೂ ಖರ್ಚು ಇತರ ಕಡೆಗಳಿಗಿಂತ ಕಡಿಮೆಯಾಗುತ್ತದೆ.

ಆದುದರಿಂದ ಖರ್ಚು, ಸೌಕರ್ಯ ಮತ್ತು ಉಳಿದ ದೃಷ್ಟಿಗಳಿಂದ ಮಂಗಳೂರನ್ನು ದೊಡ್ಡ ಬಂದರನ್ನಾಗಿ ಮಾಡುವುದು ಲಾಭಕರ. ಇಲ್ಲಿಂದ ಗೇರುಬೀಜ, ಅದರ ಎಣ್ಣೆ, ಕಾಫಿ, ಏಲಕ್ಕಿ, ಕರಿಮೆಣಸು, ಅಡಿಕೆ, ಹಂಚು, ಕಟ್ಟಿಗೆ, ಮೀನು, ಅದರ ಗೊಬ್ಬರ ಮತ್ತು ಪಶ್ಚಿಮಘಟ್ಟದ ಉತ್ಪತ್ತಿಗಳು ಈ ಎಲ್ಲವೂ ಮಂಗಳೂರಿನ ಮೂಲಕ ನಿರ್ಯಾತವಾಗುವುವು. ಇಲ್ಲಿ ಬೆಳೆಯುತ್ತಿರುವ ವ್ಯಾಪಾರ ಬಹಳ ಕಾಲದಿಂದ ನಡೆಯುತ್ತಿದೆ. ೩೦ ಹಂಚಿನ, ೫ ಕಾಫಿಯ, ೫ ಗೇರುಬೀಜದ ಕಾರಖಾನೆಗಳೂ ಅನೇಕ ಮೀನುಗಾರಿಕೆಯ ಕ್ಷೇತ್ರಗಳೂ ನೆಯಿಗೆಯ ಕಾರಖಾನೆಗಳೂ ಇಲ್ಲಿವೆ. ೨ಕೋಟಿ ರೂಪಾಯಿ ವೆಚ್ಚದ ಸಹಕಾರಿ ಪದ್ಧತಿಯ ೪ ಸಾವಿರ ಮನೆಗಳನ್ನು ಮಧ್ಯಮ ಮತ್ತು ಮಜೂರ ವರ್ಗದ ಜನರಿಗಾಗಿ ಕಟ್ಟುವ ಯೋಜನೆ ಸಿದ್ಧವಾಗಿದೆ.

### ಉತ್ತರ ಕನ್ನಡದ ಪ್ರತಿಪಾದನೆ

(ಶ್ರೀ ಕೆ. ಎಸ್. ರಾವ್ ಶಿರ್ಶಿ, ಇವರ ವಿಚಾರಗಳು)

ಕರ್ನಾಟಕವು ಸದ್ಯದಲ್ಲಿ ಒಂದು ಪ್ರಾಂತವಾಗಲಿದೆ; ಆಗುತ್ತದೆ. ಶ್ರೀ ಪಟ್ಟಾಭಿ ಸೀತಾರಾಮಯ್ಯನವರ ಆಶ್ವಾಸನದಂತೆ ಆಗಸ್ಟ ೧೫ ರ ನಂತರ ಭಾಷಾವಾರು ಪ್ರಾಂತರಚನೆಯ ವಿಷಯವನ್ನು ಕೇಂದ್ರದಲ್ಲಿ ಚರ್ಚಿಸಿ ನಿರ್ಣಯಿಸುವರೆಂದು ತಿಳಿದು ಬರುತ್ತದೆ. ನಮ್ಮ ಕರ್ನಾಟಕವು ಸಮೃದ್ಧಿ ಸ್ಥಿತಿಯಿಂದ ಇತರ ಪ್ರಾಂತಗಳಿಗಿಂತ ಕಡಿಮೆಯಿಲ್ಲ. ಅದಕ್ಕೊಂದು ಕೊರತೆಯೆಂದರೆ ಒಂದು ಬಂದರು ಮಾತ್ರ. ಎಷ್ಟೋ ವರ್ಷಗಳಿಂದ ಪ್ರಯತ್ನ ಪಟ್ಟು, ಇತ್ತೀಚೆಗೆ ಕೃತಕೃತ್ಯರಾದ ಶ್ರೀ ಎ. ಎಂ. ಭಟ್ಟರು ಈ ವಿಷಯದಲ್ಲಿ ಸ್ತುತ್ಯರು. ಏಕೆಂದರೆ ಭಟ್ಕಳವು ಕರ್ನಾಟಕದ ಮುಖ್ಯ ಬಂದರಾಗಬೇಕೆಂದು ಅವರ ಪ್ರಯತ್ನವಾಗಿರಲಿಲ್ಲ. ಅದೊಂದು ಸ್ಥಾನ; ಅದಕ್ಕೆ ಅಷ್ಟು ಮಹತ್ವವಿದೆ, ಎಂಬುದಕ್ಕಾಗಿ ಮಾತ್ರ ಪರಿಶ್ರಮ ಪಟ್ಟರು. ಬರುಬರುತ್ತ ಭಟ್ಕಳಕ್ಕೆ ಪ್ರಾಂತೀಕರಣದ ಹಿನ್ನೆಲೆ ಸಿಕ್ಕಿದೆ. ಅದನ್ನು ದೊಡ್ಡ ಬಂದರು ಮಾಡಬೇಕೆಂದು ದಕ್ಷಿಣ ಕನ್ನಡದವರ ಹೊರತಾಗಿ ಅಖಿಲ ಕರ್ನಾಟಕಸ್ಥರು ಹಳಹಳಿ ಹೂಡಿದ್ದಾರೆ. ಇಂದು ಭಟ್ಕಳವು ರೂಪುಗೊಳ್ಳುವುದರಲ್ಲಿದೆಯೆಂದು ಇತರರು ಜೊಲ್ಲು ಸುರಿಸಲಾರಂಭಿಸಿದ್ದಾರೆ.

### ಮಂಗಳೂರು

ಮಂಗಳೂರಿನವರ ಅಂಬೋಣದಂತೆ ಅಲ್ಲಿ ರೈಲು ಇರುವುದು ನಿಜ. ಅಲ್ಲಿಯೇ ಬಂದರಾದರೆ ರೈಲು ಮತ್ತು ಹಡಗುಗಳು ಒಂದುಗೂಡುವುದು ಸುಲಭವೆನ್ನುವುದೂ ಸರಿ. ಆದರೆ ಮಂಗಳೂರು ಕರ್ನಾಟಕ ಪ್ರಾಂತದ ದಕ್ಷಿಣದ ಗಡಿ ಎಂದು ಅವರು ಮರೆತಿದ್ದಾರೆ. ಮಂಗಳೂರಿನಿಂದ ಕನ್ನಡದ ಗಡಿಯಾದ ಚಂದ್ರಗಿರಿ ಹೊಳೆಯು ಬರಿಯ ೩೨ ಮೈಲು ದೂರದಲ್ಲಿದೆ. ಹೀಗಿದ್ದು ಪ್ರಾಂತದ ಒಂದು ಮೂಲೆಯಲ್ಲಿ ದೊಡ್ಡ ಬಂದರನ್ನು ಕಟ್ಟಿಸಿದ್ದರಿಂದ ಅದರ ಲಾಭ ಪ್ರಾಂತಕ್ಕಾಗುವುದಿಲ್ಲ. ಕೆಲವಷ್ಟೆ ಪ್ರದೇಶಕ್ಕೆ ಮಾತ್ರ ಲಾಭವಾಗುತ್ತದೆ. ಅಲ್ಲದೆ ಮಂಗಳೂರಿನಲ್ಲಿ ಬಂದರಾದ್ದರಿಂದ ಮೈಸೂರು ಸಂಸ್ಥಾನಕ್ಕೂ, ಕೊಡಗು ಪ್ರಾಂತಕ್ಕೂ ಉಪಯೋಗವಿಲ್ಲ. ಮೈಸೂರಿಂದ ಮಂಗಳೂರಿಗೆ ಬರಬೇಕಾದರೆ ಮಡಿಕೇರಿಯಿಂದ ಸಂಪಾಜೆ ಘಟ್ಟದ ಮಾರ್ಗವಾಗಿ ಬರಬೇಕು. ಅಥವಾ ಕಡೂರು ಮಾರ್ಗವಾಗಿ ಬರಬೇಕು. ಕಡೂರಿಂದ ಮಂಗಳೂರಿಗೆ ೧೧೫ ಮೈಲುಗಳು. ಮೇಲಾಗಿ ರೈಲು ರಸ್ತೆ ಇಲ್ಲ. ಮಂಗಳೂರಲ್ಲಿ ರೈಲಿದ್ದರೂ ಅದು ದಕ್ಷಿಣಾಭಿಮುಖವಾಗಿ ರಾಮೇಶ್ವರ ಯಾತ್ರೆಗೆ ಅನುಕೂಲವಾಗಿದೆ. ಪೂರ್ವಾಭಿಮುಖವಾಗಿ ಕರ್ನಾಟಕಕ್ಕೆ ಬರುವುದಿಲ್ಲ. ಮಂಗಳೂರಿನ ರೈಲಿನ ಉಪಯೋಗ ಕೊಡಗಿನವರಿಗೂ ಇಲ್ಲ. ಕೊಡಗಿನವರು ಮದ್ರಾಸಿಗೆ ಹೋಗಬೇಕಾದರೆ ಬೆಂಗಳೂರಿಗೆ ಬರಬೇಕು. ಪ್ರತಿಯೊಂದು ವ್ಯವಹಾರದಲ್ಲಿಯೂ ಕೊಡಗು ಮೈಸೂರನ್ನು ಹೊಂದಿಕೊಂಡಿದೆ. ಮಂಗಳೂರಿನ ರೈಲಿನ ಉಪಯೋಗ ಮಂಗಳೂರು, ಪುತ್ತೂರು, ಕಾರ್ಕಳ ಮತ್ತು ಉಡುಪಿಯವರಿಗೆ ಮಾತ್ರ. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದವರು ಬೀರೂರಿಗೆ ಹೋಗಿ ರೈಲು ಹತ್ತುತ್ತಿದ್ದರು. ಈಗಂತೂ ಸಾಗರಕ್ಕೆ ಹೋಗುತ್ತಾರೆ. ಹೀಗೆಲ್ಲ ಅನಾನುಕೂಲತೆಗಳಿದ್ದು ಮಂಗಳೂರಿನಲ್ಲಿ ಮುಖ್ಯ ಬಂದರಾದರೆ ಕರ್ನಾಟಕ ಪ್ರಾಂತಕ್ಕೆ ಅಷ್ಟು ಉಪಯೋಗವಿಲ್ಲ.

ಗೋವೆ
ಧಾರವಾಡ
ಕಾರವಾರ
ಉತ್ತರ ಕನ್ನಡ
ಹೊನ್ನಾವರ
ತಾಳಗುಪ್ಪ
ಭಟ್ಕಳ
ಉಡುಪಿ
ಮೈಸೂರು
ಮಂಗಳೂರು
ದಕ್ಷಿಣ ಕನ್ನಡ
ಕೊಡಗು

### ಮಲ್ಪೆ

ಮಲ್ಪೆಯು ಮಂಗಳೂರಿನಿಂದ ೩೧ ಮೈಲು ದೂರದಲ್ಲಿರುವ ಬಂದರು. ಹಂಗಾರ ಕಟ್ಟೆಯೇ ಇದರ ತಳಹದಿ. ಮುಖ್ಯ ಬಂದರನ್ನು ಮಲ್ಪೆಯಲ್ಲಿ ಹೊಸದಾಗಿ ಕಟ್ಟಿ, ಅದನ್ನು ರೂಪುಗೊಳಿಸುವ ಬದಲು ಇದ್ದ ಮಂಗಳೂರನ್ನೇ ಸ್ವಲ್ಪ ಸುಧಾರಿಸಿ ಮಲ್ಪೆಯನ್ನು ಗೌಣ ಬಂದರಾಗಿ ಮಾಡಬಹುದು. ಅಲ್ಲದೆ ಮಲ್ಪೆಗೆ ರೈಲೂ ಇಲ್ಲ. ಬಂದರಲ್ಲಿ ಬಂದ ಸಾಮಾನು ಸರಕುಗಳನ್ನು ಒಳನಾಡಿಗೆ ತರಬೇಕಾದರೆ ಪ್ರತಿ ಹತ್ತು ಹದಿನೈದು ಮೈಲಿಗೆ ಹೊಳೆಗಳನ್ನು ದಾಟಬೇಕಾಗುತ್ತದೆ. ಅದರಿಂದ ಮಂಗಳೂರು ಉಡುಪಿಯವರೆಗೆ ಕೊಂಚ ಲಾಭವಾಗಬಹುದು. ಮಲ್ಪೆಯಲ್ಲಿ ಮುಖ್ಯ ಬಂದರಾದರೆ ಮಂಗಳೂರಿನ ವ್ಯಾಪಾರ ಸ್ವಾಭಾವಿಕವಾಗಿ ಹೆಚ್ಚಾಗಲೇಬೇಕು. ಹೀಗೆ ಪ್ರಾಂತದ ಉಪಯೋಗದ ವಿಷಯವನ್ನು ಚಿಕ್ಕದಾಗಿ ಮಾಡಿ ಜಿಲ್ಲೆಯ ಸ್ವಾರ್ಥ ಸಾಧಿಸುವುದರಲ್ಲಿ ಅರ್ಥವಿಲ್ಲ. ಮಂಗಳೂರಲ್ಲಿ ಮುಖ್ಯ ಬಂದರನ್ನು ಕೊಡದಿದ್ದರೆ ಮಲ್ಪೆಯಲ್ಲಿ ಕೊಡಿ ಎಂದು ಹಠವಾದಿ ಬೇಡಿಕೆ ಇದೆ. ಅಂತೂ ಮುಖ್ಯ ಬಂದರು ದಕ್ಷಿಣ ಕನ್ನಡದಲ್ಲೇ ಆಗಬೇಕೆಂಬ ಹಟ. ಮಲ್ಪೆ ಬಂದರದಿಂದ ಕರ್ನಾಟಕಕ್ಕೂ ಮೈಸೂರಿಗೂ ಯಾವದೇ ಲಾಭ ಇಲ್ಲ. ಅಲ್ಲದೆ ಕೊಡಗಿನವರಿಗಂತೂ ಅದರ ಸಂಬಂಧವೇ ಇಲ್ಲ. ಹೀಗೆಲ್ಲ ಹೇಳುವುದಾದರೆ ಕುಂದಾಪುರವೂ ಒಂದು ಬಂದರು ಸ್ಥಳವಾಗಬಹುದು! ಯಾಕಾಗಬಾರದು?

### ಭಟ್ಕಳ

ಇದು ಕೊಚ್ಚಿಯ ವೆಲ್ಲಿಂಗ್ಡನ್ ದ್ವೀಪ ಮತ್ತು ಮಾರ್ಮುಗೋವೆ ಬಂದರಗಳ ಮಧ್ಯಸ್ಥಾನವಾಗಿರುತ್ತದೆ. ಅಲ್ಲದೆ ಕೊಂಕಣ ಕರಾವಳಿಗೂ ಮಧ್ಯವಾಗುತ್ತದೆ. ಹೆಚ್ಚಿನ ಸೌಕರ್ಯಗಳೆಂದರೆ ಭಟ್ಕಳ ಊರಿನ ದಕ್ಷಿಣಕ್ಕಿರುವ ಬೇಳ್ಕೆ ಮೈದಾನ ಪ್ರದೇಶವನ್ನು ರಿಪೇರಿ ಅಂಗಡಿಗಳು ಉಗ್ರಾಣಗಳು, ಕೆಲಸಗಾರರ ವಸತಿ ಸ್ಥಲ ಮುಂತಾದವುಗಳ ಕಟ್ಟಡಗಳಿಗಾಗಿ ಉಪಯೋಗಿಸಿಕೊಳ್ಳಬಹುದು; ಅಲ್ಲದೆ ಭಟ್ಕಳದಿಂದ ೩ ಮೈಲು ಉತ್ತರಕ್ಕೆ ಪೂರ್ವ ಪಶ್ಚಿಮ ಹರಿಯುವ ವೆಂಕಟಾಪುರ ನದಿಯು ಸಮುದ್ರಕ್ಕೆ ಸೇರುವ ಅರ್ಧ ಮೈಲು ಹಿಂದುಗಡೆಯ ಸಮತಟ್ಟು ಪ್ರದೇಶದಲ್ಲಿ ನೌಕಾ ನಿರ್ಮಾಣ ಕಾರಖಾನೆಯನ್ನು ನದಿಯ ದಂಡೆಗುಂಟ ಕಟ್ಟಬಹುದು. ಸಾಮಾನ್ಯ ದೊಡ್ಡ ಹಡಗುಗಳು ಧಕ್ಕೆಯಲ್ಲಿ ನಿಲ್ಲುವುದಕ್ಕೆ ಕೇವಲ ೩೦—೪೦ ಅಡಿ ನೀರಿದ್ದರೆ ಸಾಕು. ಉದಾಹರಣೆಗಾಗಿ "Empire Rani" "Ozarda" ಮುಂತಾದ ೧೫೦೦೦ ಟನ್ನುಗಳ ಭಾರ ಒಯ್ಯುವ ಹಡಗುಗಳೂ ವಿಶಾಖಪಟ್ಟಣದ ೨೦—೩೦ ಅಡಿ ನೀರಿನ ಧಕ್ಕೆಗಳಲ್ಲಿ ತಂಗುತ್ತಿದ್ದವು. ಅಲ್ಲಿಂದಲೆ "ಕ್ರೇನು"ಗಳ (Cranes) ಮೂಲಕ ಸಾಮಾನು ಹೇರುವ ವ್ಯವಸ್ಥೆಯಿದೆ. ಅಂತಹ ವ್ಯವಸ್ಥೆಯನ್ನು ವೆಂಕಟಾಪುರ ನದಿಯಲ್ಲಿ ಮಾಡಬಹುದು. ಅದೆಲ್ಲ ಶ್ರೀ ಭಟ್ಟರ ಯೋಜನೆಯಿಂದ ತಿಳಿದುಕೊಳ್ಳಬೇಕು.

ಇನ್ನೊಂದು ಅನುಕೂಲತೆಯೆಂದರೆ, ರೈಲುದಾರಿ ತಾಳಗುಪ್ಪೆಗೆ ಬಂದಿದೆ. ತಾಳಗುಪ್ಪೆಯಿಂದ ಕರಗಲ್ಲ, ಕೆಮ್ಮಣ್ಣಗಾರ, ಹಿರೇಗುಡ್ಡದ ಕಂದರದಿಂದ ಮೈಸೂರು ಗಡಿಯವರೆಗೆ ರೈಲ್ವೆ ಸರ್ವೆ ಆಗಿರುತ್ತದೆ. ಇನ್ನು ಭಟ್ಕಳಕ್ಕೆ ಕೇವಲ ೧೭ ಮೈಲು ದೂರವಿದೆ. ಅದೂ ಸಮತಟ್ಟು ಪ್ರದೇಶವಿರುತ್ತದೆ. ಹೀಗಾಗಿ ತಾಳಗುಪ್ಪೆ-ಭಟ್ಕಳ ರೈಲುದಾರಿ ಶೀಘ್ರದಲ್ಲಿಯೇ ಕೂಡುವದಿದೆ. ಈ ದಾರಿಯಿಂದ ಬಳ್ಳಾರಿಯಿಂದ ಭಟ್ಕಳದ ಸಂಬಂಧ ಬೆಳೆಸಿದಂತಾಗುತ್ತದೆ. ಅಲ್ಲದೆ ಪರದೇಶಗಳಿಂದ ಬರುವ ಹಡಗಗಳು ಮುಂಬಯಿಗಿಂತ ೨೪ ತಾಸು ಮುಂಚಿತವಾಗಿ ಭಟ್ಕಳ ಸೇರಬಹುದೆಂದು ತರ್ಕಿಸಲಾಗಿದೆ.

ಇನ್ನೊಂದು ವಿಷಯವೆಂದರೆ ಒಂದು ಕಾಲದಲ್ಲಿ ದಕ್ಷಿಣ—ಉತ್ತರ ಕನ್ನಡ ಜಿಲ್ಲೆಗಳು ಒಂದಾಗಿದ್ದು ಕಾನರಾ ಜಿಲ್ಲೆಯೆನಿಸಿತ್ತು. ಜಿಲ್ಲಾ ರಾಜಧಾನಿಯು ಹೊನ್ನಾವರವಾಗಿತ್ತು. ಕೆಲವೊಂದು ಕಾರಣದಿಂದ ಅವನ್ನು ಬೇರ್ಪಡಿಸಿದರು. ಆಗಲೂ ಭಟ್ಕಳದ ಬಂದರವು ಪ್ರಶಸ್ತಿ ಪಡೆದಿತ್ತು. ತನ್ನ ಮೂಲ ಹಕ್ಕನ್ನು ಅಥವಾ ಸ್ಥಾನ ಯೋಗ್ಯತೆಯನ್ನು ಪುನಃ ಭಟ್ಕಳವು ಪಡೆಯುವುದಿದೆ; ಪಡೆಯುತ್ತಿದೆ. ಅದಕ್ಕೆ ದಕ್ಷಿಣ ಕನ್ನಡದವರಾದರೂ ಅಷ್ಟು ವ್ಯಸನದಿಂದಿರುವುದೇಕೆ? ಭೌಗೋಲಿಕ ದೃಷ್ಟಿಯಿಂದ ಕನ್ನಡ ಕರಾವಳಿಯ ಕೇಂದ್ರವಾದ ಭಟ್ಕಳವೇ ಮುಖ್ಯ ಬಂದರಿಗೆ ಯೋಗ್ಯವೆಂದು ಸರಕಾರವನ್ನು ಒತ್ತಾಯಪಡಿಸಿ ಆ ಬಗ್ಗೆ ಕೈಕೊಂಡ ಕಾರ್ಯಗಳಲ್ಲಿ ದಕ್ಷಿಣ ಕನ್ನಡದವರೂ ಇತರ ಕರ್ನಾಟಕಸ್ಥರೊಡನೆ ಧ್ವನಿಗೂಡಿಸುವರೆಂದು ಹಾರೈಸಲಾಗಿದೆ.

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಕರ್ನಾಟಕ ವಿಶ್ವವಿದ್ಯಾಲಯ

ಪ್ರಾದೇಶಿಕ ವಿಶ್ವವಿದ್ಯಾಲಯ ಸ್ಥಾಪನೆಯ ತತ್ವವನ್ನೊಪ್ಪಿ ಮುಂಬಯಿ ಸರಕಾರದವರು ಕರ್ನಾಟಕ ವಿಶ್ವವಿದ್ಯಾಲಯ ಸಮಿತಿಯನ್ನು ನ್ಯಾಯಮೂರ್ತಿ ಲೋಕೂರ ನಾರಾಯಣ ರಾಯರ ಅಧ್ಯಕ್ಷತೆಯಲ್ಲಿ ನೇಮಿಸಿರುವರು. ಮಹಾರಾಷ್ಟ್ರ ವಿಶ್ವವಿದ್ಯಾಲಯ ಸಮಿತಿಯನ್ನು ನೇಮಿಸಿ ಅದರ ವರದಿ ಹೊರಬಿದ್ದ ಬಳಿಕವಾದರೂ ಮುಂಬಯಿ ಸರಕಾರದವರು ಕನ್ನಡಿಗರ ಬಹಳ ದಿನಗಳ ಬೇಡಿಕೆಗೆ ಮನ್ನಣೆ ಕೊಟ್ಟದ್ದು ಸಂತೋಷದ ಸಂಗತಿಯಾಗಿದೆ. ಈ ವಿಶ್ವವಿದ್ಯಾಲಯ ಸಮಿತಿಯಲ್ಲಿ ಕರ್ನಾಟಕದ ಪ್ರಮುಖ ಶಿಕ್ಷಣತಜ್ಞರ ಸೇರ್ಪಡೆಯಾಗಿದೆ. ಈ ಸಮಿತಿಯವರು ಕಳೆದ ತಿಂಗಳು ಬೆಳಗಾಂವಿಯಲ್ಲಿ ಸಭೆ ಸೇರಿ ಪ್ರಾಸ್ತಾವಿಕ ಚರ್ಚೆಯನ್ನು ಮಾಡಿದ್ದಲ್ಲದೆ ಪ್ರಶ್ನೆಮಾಲಿಕೆಯನ್ನು ಹೊರಡಿಸಿ ಪ್ರಮುಖ ಶಿಕ್ಷಣ ಸಂಸ್ಥೆಗಳಿಗೂ ಶಿಕ್ಷಣತಜ್ಞರಿಗೂ ಶಿಕ್ಷಣಾಧಿಕಾರಿಗಳಿಗೂ ಇತರರಿಗೂ ಕಳಿಸಿಕೊಟ್ಟಿದ್ದಾರೆ. ಜುಲೈ ೩೧ರೊಳಗಾಗಿ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು ಕೋರಲಾಗಿದೆ ಪ್ರಶ್ನೆಮಾಲಿಕೆ ಮುಟ್ಟದಿದ್ದವರು ಕೂಡ ಕಾರ್ಯದರ್ಶಿ ಕರ್ನಾಟಕ ವಿಶ್ವವಿದ್ಯಾಲಯ ಸಮಿತಿ ಕರ್ನಾಟಕ ಕಾಲೇಜು ಧಾರವಾಡ ಈ ವಿಳಾಸಕ್ಕೆ ಬರೆದು ಅದನ್ನು ತರಿಸಿಕೊಂಡು ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಸೂಚಿಸಲಾಗಿದೆ. ಕರ್ನಾಟಕ, ಸ್ವತಂತ್ರ ಪ್ರಾಂತ ಮತ್ತು ವಿಶ್ವವಿದ್ಯಾಲಯವನ್ನು ಸಂಸ್ಥಾಪಿಸಬೇಕೆಂದು ಕಳೆದ ಕಾಲು ಶತಮಾನದಿಂದಲೂ ಪ್ರಯತ್ನಿಸುತಿದೆ. ಆದರಿನ್ನೂ ಅದರ ಆಸೆ ಕೈಗೂಡಲೊಲ್ಲದು. ಈಗಲೇನೊ ಅದರ ಕಾಲ ಬಂದಿದೆಂದು ತೋರುತ್ತದೆ. ಈ ಸಮಯದಲ್ಲಿ ಕರ್ನಾಟಕದ ಪ್ರಮುಖರು ಮುಂದೆ ಬಂದು ತಮ್ಮ ಅಭಿಪ್ರಾಯಗಳನ್ನು ತಿಳಿಸಿ ಸಮಿತಿಯ ಕಾರ್ಯ ಸುಗಮವಾಗಿ ಸಾಗುವಂತೆ ಮಾಡಬೇಕೆಂದು ಸೂಚಿಸುತ್ತೇವೆ. ಸದ್ಯಕ್ಕೆ ಈ ಸಮಿತಿಯವರು ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳನ್ನು ಮತ್ತು ಅದರಲ್ಲಿನ ಸಂಸ್ಥಾನಗಳನ್ನು ತಮ್ಮ ಅಧಿಕಾರಕ್ಷೇತ್ರದಲ್ಲಿಟ್ಟುಕೊಂಡಿದ್ದಾರೆ. ಕರ್ನಾಟಕ ಸ್ವತಂತ್ರ ಪ್ರಾಂತ ಮೊದಲೊ ವಿಶ್ವವಿದ್ಯಾನಿಲಯ ಮೊದಲೊ ಎಂಬುದು ಸಮಿತಿಯವರು ಕೇಳಿದ ಒಂದು ಪ್ರಶ್ನೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಮಾತಾಡುವ ಇತರ ಪ್ರದೇಶಗಳನ್ನು ಅಂದರೆ ದಕ್ಷಿಣ ಕನ್ನಡ, ಬಳ್ಳಾರಿ, ಕೊಡಗುಗಳನ್ನು ಸೇರಿಸಬೇಕೊ ಎಂಬುದು ಮತ್ತೊಂದು ಪ್ರಶ್ನೆ. ಮೈಸೂರು ವಿಶ್ವವಿದ್ಯಾಲಯ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಸಂಬಂಧವೆಂತಿರಬೇಕು? ಭಾವೀ ಕರ್ನಾಟಕ ವಿಶ್ವವಿದ್ಯಾಲಯದ ಸ್ಥಳ, ಸ್ವರೂಪ, ಘಟನೆ, ವೆಚ್ಚ ಮೊದಲಾದವುಗಳು ಎಂತಿರಬೇಕು ಇವೆ ಮೊದಲಾದ ಪ್ರಶ್ನೆಗಳು ಈ ಪ್ರಶ್ನೆಮಾಲಿಕೆಯಲ್ಲಿ ಅಡಕವಾಗಿವೆ. ಕರ್ನಾಟಕದ ಪ್ರಮುಖ ಶಿಕ್ಷಣತಜ್ಞರು ತಮ್ಮ ಅಭಿಪ್ರಾಯಗಳನ್ನು ಆದಷ್ಟು ಬೇಗ ಕಳಿಸಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಯ ಪ್ರಶ್ನೆಯಲ್ಲಿ ಆಸ್ಥೆಯಿಂದ ಸಹಕರಿಸಬೇಕೆಂದು ಆಗ್ರಹದಿಂದ ಬಿನ್ನವಿಸುತ್ತೇವೆ.

## ನ್ಯಾಯ್ಯವಾದ ಬೇಡಿಕೆ

ಹತ್ತು ಹನ್ನೊಂದನೆಯ ಶತಮಾನದಿಂದಲೂ ...ರ್ನಾಟಕ ಪ್ರಾಂತದಲ್ಲಿದ್ದ ನೀಲಗಿರಿ ಜಿಲ್ಲೆಯು ...ದುರ್ವಿಪಾಕದಿಂದ ಪರಕೀಯರ ವಶವಾಗಿ ...ನಾಷೆಯ ಪ್ರಭುತ್ವದಲ್ಲಿ ಸಿಕ್ಕು ಒದ್ದಾಡು... ಬ್ರಿಟಿಶರು ಹಿಂದುಸ್ತಾನವನ್ನು ಗೆಲ್ಲುತ್ತ ...ವಂತೆ ತಮಗನುಕೂಲವಾಗುವ ಬಗೆಯಲ್ಲಿ ...ಗಳನ್ನು ಕಟ್ಟಹತ್ತಿದರು. ತತ್ಪರಿಣಾಮ... ಕರ್ನಾಟಕ ಬೇರೆ ಬೇರೆ ಆಡಳಿತಗಳಲ್ಲಿ ಛಿನ್ನವಿಚ್ಛಿನ್ನವಾಗಿ ಹೋಯಿತು. ಇದೇ ಬಗೆಯ ತಪ್ಪು ಧೋರಣೆಗೆ ನೀಲಗಿರಿ ಜಿಲ್ಲೆಯೂ ಆಹುತಿಯಾಗಿ ತಮಿಳು ಪ್ರಾಂತದಲ್ಲಿ ಸೇರಿಸಲ್ಪಟ್ಟಿತು. ತಮಿಳರು ಸ್ವಾಭಾವಿಕವಾಗಿ ತಮ್ಮ ಮಾತೃಭಾಷೆಯನ್ನೆ ಒತ್ತಾಯದಿಂದ ಈ ಕನ್ನಡಿಗರ ಬಾಯಿಯಲ್ಲಿ ತುರುಕಹತ್ತಿದರು. ನ್ಯಾಯತತ್ಪರತೆಯು ಇಲ್ಲದಿದ್ದ ನೀಲಗಿರಿ ನಿವಾಸಿಗಳು ಈ ವರೆಗೆ ಆ ಅನ್ಯಾಯವನ್ನು ಸಹಿಸುತ್ತಲೆ ಬಂದಿರುವರು. ಕಾಂಗ್ರೆಸ್ಸು ತನ್ನ ಆಡಳಿತದ ಹೊಸ ಪ್ರಾಂತಗಳನ್ನು ರಚಿಸುವಾಗಲೂ ಈ ನೀಲಗಿರಿ ಜಿಲ್ಲೆಯನ್ನೆ ಕರ್ನಾಟಕದಲ್ಲಿ ಸೇರಿಸದೆ ತಮಿಳುನಾಡಿನಲ್ಲಿ ಸೇರಿಸಿ ಅನ್ಯಾಯವನ್ನು ಮಾಡಿದರು. ಕನ್ನಡಿಗರು ಅದೇ ತಾನೆ ಸ್ವತಂತ್ರ ಪ್ರಾಂತವನ್ನು ಪಡೆದಿದ್ದರಿಂದ ನೀಲಗಿರಿ ಮುಂತಾದ ಜಿಲ್ಲೆಗಳ ... ಅಷ್ಟೊಂದು ದಕ್ಷರಾಗಲಿಲ್ಲ. ಅದರೀಗ ಕರ್ನಾಟಕದಲ್ಲಿ ತಮ್ಮತನದ ಅರಿವಾಗಿದು ನೀಲಗಿರಿಯು ಕರ್ನಾಟಕದ ಭಾಗವೆಂದು ಮನವರಿಕೆಯಾಗಿದೆ. ಅದನ್ನು ಪಡೆವ ಬಗ್ಗೆಯೂ ಚಳವಳಿ ನಡೆದಿದೆ. ಈಗ ನೀಲಗಿರಿ ತಾಲೂಕು ಮತ್ತು ಹಳ್ಳಿ ಕಾಂಗ್ರೆಸ ಸಂಸ್ಥೆಗಳ ಪರವಾಗಿ ಶ್ರೀ ಬೊಳ್ಳಯ್ಯಗೌಡರು ಎಂ. ಎಲ್. ಎ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ತಮಗಾದ ಅನ್ಯಾಯವನ್ನು ಪ್ರತಿಭಟಿಸುವ ಮತ್ತು ನ್ಯಾಯವನ್ನು ದಯಪಾಲಿಸುವ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು. ಈ ಗೊತ್ತುವಳಿಗಳ ಸಾರವನ್ನು ಬೇರೆಕಡೆ ಕೊಟ್ಟಿದ್ದೇವೆ. ನೀಲಗಿರಿ ಭಾಗದಲ್ಲಿ ಕನ್ನಡ ಶಾಲೆಗಳನ್ನು ಹೊರಡಿಸಬೇಕು ಭಾವೀ ಪ್ರಾಂತರಚನೆಯಲ್ಲಿ ನೀಲಗಿರಿ ಜಿಲ್ಲೆಯನ್ನು ಕರ್ನಾಟಕ ಪ್ರಾಂತದಲ್ಲಿ ಸೇರಿಸಬೇಕು ಎಂಬುದೆ ನೀಲಗಿರಿ ನಿವಾಸಿಗಳ ಮುಖ್ಯ ಬೇಡಿಕೆ. ಈ ಸಂಬಂಧದಲ್ಲಿ ಸಾರ್ವತ್ರಿಕ ಮತಗಣನೆ ಮುಂತಾದ್ದನ್ನು ತೆಗೆದುಕೊಳ್ಳುವಾಗ ಮೂಲನಿವಾಸಿಗಳ ಅಭಿಪ್ರಾಯವನ್ನಷ್ಟೇ ಕೇಳಬೇಕಲ್ಲದೆ ವ್ಯಾಪಾರ ಉದ್ದಿಮೆಗಾಗಿಯೆಂದು ಬಂದು ನೆಲಸಿದ ಪರಕೀಯರ ಅಭಿಪ್ರಾಯವನ್ನು ಕೇಳಬಾರದೆಂದು ಈ ಸಭೆಯಲ್ಲಿ ಅಭಿಪ್ರಾಯ ಪಡಲಾಗಿದೆ. ಮದ್ರಾಸ ಸರಕಾರದವರು ಕೂಡಲೆ ಅಲ್ಲಿನ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡವನ್ನು ಪ್ರಾರಂಭಿಸಬೇಕಾದುದು ಕರ್ತವ್ಯವಾಗಿದೆ. ಘಟನಾ ಸಮಿತಿಯವರು ಈ ಜನರ ಅಭಿಪ್ರಾಯವನ್ನು ತಿಳಿದುಕೊಂಡು ಈ ಭಾಗವನ್ನು ಕರ್ನಾಟಕದಲ್ಲಿ ಸೇರಿಸಿ ಅವರಿಗೆ ನ್ಯಾಯ ದೊರೆವಂತೆ ಯೋಜಿಸಬೇಕೆಂದು ಆಗ್ರಹಪಡಿಸುತ್ತೇವೆ.

## ವನಸಂಪತ್ತು

ಮುಂಬಯಿ ಸರಕಾರದವರು ವನಸಂಪತ್ತನ್ನಭಿವರ್ಧಿಸಿ ಸರಕಾರದ ಹಾಗು ಜನತೆಯ ಅರ್ಥಿಕೋನ್ನತಿಯನ್ನು ಸಾಧಿಸಲಣಿಯಾದುದು ಸಂತೋಷದ ಸಂಗತಿಯಾಗಿದೆ. ಈ ವನಸಂಪತ್ತನ್ನು ಹೆಚ್ಚು ಶಾಸ್ತ್ರೀಯ ಪದ್ಧತಿಯಿಂದ ಅಭಿವೃದ್ಧಿಪಡಿಸುವ ಯೋಜನೆಯನ್ನು ಸರಕಾರದವರು ಗೊತ್ತುಪಡಿಸಿರುವರೆಂದು ತಿಳಿಯುತ್ತದೆ ಗ್ರಾಮಕೈಗಾರಿಕೆಗಳಿಗೆ ಅವಶ್ಯಕ ಅನುಕೂಲತೆಗಳನ್ನು ಕಲ್ಪಿಸಿಕೊಳ್ಳುವದೇ ಸರಕಾರದ ಧೋರಣೆಯಾಗಿದೆಯಂತೆ. ಕಾಲುವೆಗಳ ಪಕ್ಕಗಳಲ್ಲಿ, ರಾಜಬೀದಿಗಳ ಪಕ್ಕಗಳಲ್ಲಿ ಗಿಡಗಂಟಿಗಳನ್ನು ಹಚ್ಚಿಸಿ ವನಸಂಪತ್ತನ್ನು ಬೆಳಸಿಕೊಳ್ಳಲಾಗುವದಂತೆ. ಇತ್ತೀಚೆ ಈ ಸಂಪತ್ತು ಬಹಳ ಮಟ್ಟಿಗೆ ಹಾಳಾಗುತಿರುವದು ಶೋಚನೀಯವಾಗಿದೆ. ಇಡೀ ಪ್ರಾಂತದ ಭೂಕ್ಷೇತ್ರದಲ್ಲಿ ಸುಮಾರು ಕಾಲು ಪಾಲಿನಷ್ಟು ವನಸಂಪತ್ತಿರುವದವಶ್ಯವೆಂದು ತಜ್ಞರ ಮತ. ಇತ್ತ ಸರಕಾರದವರು ಗಮನಿಸಿದ್ದು ಈ ಕೆಲಸದಲ್ಲಿ ಹಳ್ಳಿಗರನ್ನೂ ಪ್ರೋತ್ಸಾಹಿಸಲಣಿಯಾಗಿರುವರು. ವನಸಂಪತ್ತನ್ನು ಹೆಚ್ಚಿಸಿದ್ದಾದರೆ ಅದರಿಂದ ಬಗೆಬಗೆಯ ಉದ್ಯೋಗಗಳನ್ನಭಿವೃದ್ಧಿಪಡಿಸಬಹುದಾಗಿದೆ. ವನದಲ್ಲಿ ಕಚ್ಚಾಮಾಲು ಬೇಕಾದಷ್ಟು ಸಿಕ್ಕುತ್ತದೆಂಬದು ಅನುಭವದ ಮಾತು. ಅದೇ ರೀತಿಯಾಗಿ ಹುಲ್ಲುಗಾವಲುಗಳನ್ನು ಸುಸ್ಥಿತಿಯಲ್ಲಿಡುವದರ ಕಡೆಗೂ ಸರಕಾರದವರು ಲಕ್ಷ್ಯ ಪೂರೈಸಲಿರುವರು. ಈ ವನಸಂಪತ್ತನ್ನು ಅಭಿವೃದ್ಧಿಪಡಿಸಿಕೊಂಡು ಅದರಿಂದ ಬಗೆಬಗೆಯ ಉದ್ಯೋಗಗಳನ್ನು ಕೈಕೊಳ್ಳುವಂತೆ ಜನರನ್ನು ಪ್ರೋತ್ಸಾಹಿಸುವದಕ್ಕಾಗಿ ಪ್ರಚಾರ ಕಾರ್ಯವನ್ನೂ ಭರದಿಂದ ಸಾಗಿಸಲಾಗುವದು. ಸರಕಾರದವರ ಈ ಯೋಜನೆ ಅತ್ಯಂತ ಇಷ್ಟ ಮತ್ತು ಲಾಭಕರವಾಗಿದೆಂದು ಬೇರೆ ಹೇಳಬೇಕಿಲ್ಲ. ಸಾರ್ವಜನಿಕರು ಈ ಯೋಜನೆಯಲ್ಲಿ ಎಲ್ಲಬಗೆಯಿಂದ ಸಹಕರಿಸಬೇಕಾದುದತ್ಯವಶ್ಯ. ಅನವಶ್ಯಕ ವೆಚ್ಚ ಹೆಚ್ಚಾಗಿ ಲಾಭ ಕಡಿಮೆಯಾಗದಂತೆ ಅಧಿಕಾರಿಗಳು ಲಕ್ಷ್ಯ ಪೂರಯಿಸುವದು ಕರ್ತವ್ಯವಾಗಿದೆ. ಈ ಯೋಜನೆಯಲ್ಲಿ ಬರಿ ಸಾರ್ವಜನಿಕ ಹಣದ ಅಪವ್ಯಯವಾಗದೆ ಜನತೆಗೆ ಹೆಚ್ಚು ಲಾಭವಾಗಿ ಬಗೆಬಗೆಯ ಉದ್ಯೋಗಧಂದೆಗಳು ದೇಶದಲ್ಲಿಹೊರಡಬೇಕೆಂಬದೆ ಉದ್ದೇಶವಾಗಿದೆಂದು ಪ್ರತ್ಯೇಕ ಹೇಳಬೇಕಿಲ್ಲ.

## ರೇಲ್ವೆ ಕೆಲಸಗಾರರ ಕರ್ತವ್ಯ

ಕೇಂದ್ರ ಸಂಬಳ ಸಮಿತಿಯವರು ಸರಕಾರಿ ನೌಕರರಿಗೆ ಕೊಡಮಾಡಿದ ಸಂಬಳ ಭತ್ತೆ ಮೊದಲಾದವುಗಳನ್ನು ವಿರೋಧಿಸುವದಕ್ಕಾಗಿ ರೇಲ್ವೆ ಕಾಮಗಾರ ಸಂಘದವರು ಸಭೆ ಸೇರಿ ನಿರ್ಣಯ ಸ್ವೀಕರಿಸಬೇಕೆಂದು ನಿರ್ಧರಿಸಿದ್ದರಷ್ಟೆ. ಆದರೆ ಈ ವಿರೋಧವನ್ನು ಪ್ರದರ್ಶಿಸುವದಕ್ಕಾಗಿ ಮುಂಬಯಿಯಲ್ಲಿಯ ಜಿ ಆಯ. ಪಿ. ಮತ್ತು ಬಿ. ಬಿ. ಸಿ. ಆಯ. ರೇಲ್ವೆ ವರ್ಕಶಾಪುಗಳ ಕೆಲಸಗಾರರು ಸಂಪನ್ನು ಹೂಡಿರುವರು. ಶಾಂತರೀತಿಯಿಂದ ಸಂಪು ಹೂಡಿ ತಮ್ಮ ಸಕ್ರಿಯ ವಿರೋಧವನ್ನು ಪ್ರದರ್ಶಿಸಿದ್ದರೂ ಅಷ್ಟೇನು ಅನುಚಿತವಾಗುತಿರಲಿಲ್ಲ. ಆದರೆ ಕೆಲಸಗಾರರು ಉಗಿಬಂಡಿಗಳ ಮೇಲೆ ಕಲ್ಲುಗಳನ್ನೊಗೆಯುವುದು, ತಂತಿಗಳನ್ನು ಕತ್ತರಿಸುವದು, ಉಗಿಬಂಡಿಗಳಿಗೆ ಬೆಂಕಿ ಹಚ್ಚುವುದು, ಬಂಡಿಗಳ ಓಡಾಟವನ್ನೆ ನಿಲ್ಲಿಸುವುದು ಮೊದಲಾದ ಅಪಾಯಕಾರಕ ಕ್ರಮಗಳನ್ನು ಕೈಕೊಂಡಿದ್ದರಿಂದ ಪೋಲಿಸರು ಗೋಳೀಬಾರು ಮಾಡಿದರು. ತತ್ಪರಿಣಾಮವಾಗಿ ಮುಂಬಯಿಯಲ್ಲಿ ಅನಾಹುತವೆ ನಡೆಯಹತ್ತಿದೆ. ರೇಲ್ವೆಯವರು ವರ್ಕಶಾಪುಗಳನ್ನೆ ಮುಚ್ಚಿಬಿಟ್ಟಿರುವರು. ರೇಲ್ವೆ ಕೆಲಸಗಾರರು ಇಂತು ತಮ್ಮ ಸಂಘದ ನಿರ್ಣಯಕ್ಕೆ ಬದ್ಧರಾಗದೆ ಗಂಡಾಂತರದ ಪರಿಸ್ಥಿತಿಯುಂಟಾಗುವಂತಹ ಕೃತ್ಯಗಳನ್ನೆಸಗುವದು ಅತ್ಯಂತ ಅನುಚಿತವೆಂದು ಹೇಳಬೇಕಾಗುವದು. ಇಂಥ ಅನುಚಿತ ಕೃತ್ಯಗಳನ್ನು ಮಾಡುವದರಿಂದ ದೇಶಕ್ಕೆ ಮಹಾ ಅನರ್ಥ ಸಂಭವಿಸುವದಲ್ಲದೆ ಕೂಲಿಕಾರರ ಹಿತವೂ ಸಾಧಿಸುವದಿಲ್ಲ. ಆದುದರಿಂದ ಕೂಲಿಕಾರರು ಕೂಡಲೆ ಸಂಪನ್ನು ನಿಲ್ಲಿಸಿ ಶಾಂತರೀತಿಯಿಂದ ಮೊದಲಿನಂತೆ ತಮ್ಮ ಕೆಲಸವನ್ನು ಸಾಗಿಸಬೇಕು. ರೇಲ್ವೆ ಫೆಡರೇಶನ್ನಿನ ಅಧ್ಯಕ್ಷರಾದ ಜಯಪ್ರಕಾಶ ನಾರಾಯಣರೂ ಇದೇ ಬಗೆಯ ವಿನಂತಿಯನ್ನು ಮಾಡಿಕೊಂಡಿರುವರು. ರೇಲ್ವೆ ಕೆಲಸಗಾರರ ಭವಿತವ್ಯ ಫೆಡರೇಶನ್ನಿನ ಕೈಯಲ್ಲಿಯೆ ಇದ್ದು ಸಕಾಲದಲ್ಲಿ ಅದು ರೇಲ್ವೆ ಕೆಲಸಗಾರರಿಗೆ ಮಾರ್ಗದರ್ಶನ ಮಾಡುವದೆಂದೂ ಜಯಪ್ರಕಾಶರು ಹೇಳಿರುವರು. ತಮ್ಮ ಧುರೀಣರ ಬಿನ್ನಹವನ್ನು ಮನ್ನಿಸಿ ಮುಂಬಯಿಯಲ್ಲಿಯ ರೇಲ್ವೆ ಕೆಲಸಗಾರರು ಕೂಡಲೆ ಸಂಪನ್ನು ಹಿಂತೆಗೆದುಕೊಂಡು ಶಾಂತಿಯನ್ನು ಪ್ರಸ್ಥಾಪಿಸಬೇಕು. ಇತ್ತೀಚೆ ರೇಲ್ವೆಯ ಆಡಳಿತದಲ್ಲಿ ಅನಿಯಮಿತತನವೂ ಅವ್ಯವಸ್ಥೆಯೂ ಬಹಳ ಕಂಡುಬರುತ್ತದೆ ಇದರಿಂದ ಪ್ರವಾಸಿಕರಿಗೆ ಬಹಳ ತೊಂದರೆಯಾಗುವದಲ್ಲದೆ ಆರ್ಥಿಕ ಹಾನಿಯೂ ಆಗುತ್ತದೆ. ಯಂತ್ರ ಮೊದಲಾದವು ಸಾಕಷ್ಟಿಲ್ಲದ ಮೂಲಕ ಈ ಬಗೆಯ ಅವ್ಯವಸ್ಥೆಯಾಗುತಿದೆಂದು ಹೇಳಬಹುದಾದರೂ ಕೆಲಸಗಾರರೂ ಈ ಅವ್ಯವಸ್ಥೆಗೆ ಕೆಲಮಟ್ಟಿಗೆ ಹೊಣೆಗಾರರೆಂದು ಹೇಳದೆ ಗತ್ಯಂತರವಿಲ್ಲ. ರೇಲ್ವೆ ಕೆಲಸಗಾರರುಈ ಬಗ್ಗೆಯೂ ವಿಚಾರ ಮಾಡಿ ಕರ್ತವ್ಯವನ್ನು ಮಾಡಬೇಕೆಂದು ಸೂಚಿಸುತ್ತೇವೆ.

## ಬಂಗಾಲದಲ್ಲಿ ಛಾಯಾ ಮಂತ್ರಿಮಂಡಳ

ಬ್ರಿಟಿಶ್‌ರು ಅಧಿಕಾರದಾನ ಮಾಡಿದ ಕೂಡಲೆ ಅಂದರೆ ಈಗಿನ ಪ್ರಕಟನೆಯಂತೆ ಅಗಸ್ಟ ೧೫ರ ನಂತರ ಬಂಗಾಲದಲ್ಲಿ ಪೂರ್ವ ಮತ್ತು ಪಶ್ಚಿಮ ಬಂಗಾಲವೆಂದು ಎರಡುವಿಭಾಗಗಳಾಗುವವಷ್ಟೆ. ಈ ಮಧ್ಯಂತರ ಅವಧಿಯಲ್ಲಿ ಸದ್ಯದ ಮುಸ್ಲಿಂಲೀಗ ಮಂತ್ರಿಮಂಡಳ ಅಧಿಕಾರದಲ್ಲಿರುವುದು ಸಮಂಜಸವಲ್ಲ, ಎರಡೂ ಭಾಗಗಳ ಹಿತಸಂಬಂಧಗಳನ್ನು ಅದು ನೋಡಿಕೊಳ್ಳಲಾರದು ಎಂದು ಮುಂಚಾಗಿ ಕಂಡುಬಂದದ್ದರಿಂದ ಎರಡೂ ಭಾಗಗಳಿಗಾಗಿ ಪ್ರತ್ಯೇಕ ಮಂತ್ರಿಮಂಡಳಗಳನ್ನು ರಚಿಸಬೇಕೆಂದು ಕೇಳಿಕೊಳ್ಳಲಾಯಿತು. ಅದು ಶಕ್ಯವಿಲ್ಲದಿದ್ದರೆ ಸದ್ಯದ ಮಂತ್ರಿಮಂಡಳವನ್ನು ವಿಸರ್ಜಿಸಿ ಗವರ್ನರರು ತಮ್ಮ ಕೈಯಲ್ಲಿಯೆ ಅಧಿಕಾರವನ್ನು ವಹಿಸಬೇಕೆಂದು ಬಿನ್ನವಿಸಲಾಯಿತು. ಆದರೆ ಗವರ್ನರರು ಇವೆರಡನ್ನೂ ಮಾಡದೆ ಈಗಿದ್ದ ಮಂತ್ರಿಮಂಡಳವನ್ನು ಹಾಗೆಯೆ ಇಟ್ಟು ಅದರ ಸಹಾಯಕ್ಕೆಂದು ಛಾಯಾ ಮಂತ್ರಿಮಂಡಳವೊಂದನ್ನು ರಚಿಸಲು ಪಶ್ಚಿಮ ಬಂಗಾಲ ವಿಭಾಗದ ಕಾಂಗ್ರೆಸ ಧುರೀಣರಾದ ಡಾ. ಪಿ. ಸಿ. ಘೋಷರನ್ನು ಬಿನ್ನವಿಸಿದರು ಅವರಂತೆ ಅವರು ಮಂತ್ರಿಮಂಡಳ ರಚಿಸಿದ್ದು ಗವರ್ನರರು ಅದಕ್ಕೆ ಒಪ್ಪಿಗೆ ಕೊಟ್ಟಿರುವರು. ಈ ಮಂತ್ರಿಗಳಿಗೆ ಯಾವ ದಫ್ತರಗಳು ಇಲ್ಲದಿದ್ದರೂ ಪಶ್ಚಿಮ ವಿಭಾಗದ ಬಗ್ಗೆ ಯಾವದೇ ಬಗೆಯ ಧೋರಣ ವಹಿಸುವದಾದಲ್ಲಿ ಈ ಛಾಯಾ ಮಂತ್ರಿಮಂಡಳದ ಅಭಿಪ್ರಾಯವನ್ನು ಕೇಳಿಕೊಳ್ಳಬೇಕೆಂದು ವಿಧಿಸಲಾಗಿದೆ. ಮಂತ್ರಿಮಂಡಳದ ಸಭೆಗಳಲ್ಲಿ ಭಾಗವಹಿಸಲು ಪಶ್ಚಿಮ ವಿಭಾಗಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ತರಿಸಿಕೊಳ್ಳಲು ಅವುಗಳ ಸಂಬಂಧದಲ್ಲಿ ನಿರ್ಣಯ ಕೊಡಲು ಯಾವದೆ ಸೂಚನೆಯನ್ನು ಪರಿಶೀಲಿಸಲು ಸೆಕ್ರೆಟರಿಗಳಿಗೆ ನೇರವಾಗಿ ತಿಳಿಸಲು ಈ ಮಂತ್ರಿಮಂಡಳಕ್ಕೆ ಅಧಿಕಾರವಿದೆ. ಹಿಂದೂ ಮಹಾಸಭೆಯ ಧುರೀಣರಾಗಿರುವ ಡಾ. ಶ್ಯಾಮಪ್ರಸಾದ ಮುಕರ್ಜಿಯವರನ್ನೂ ಈ ಮಂತ್ರಿಮಂಡಳದಲ್ಲಿ ಸೇರಿಸಿಕೊಳ್ಳಬೇಕೆಂದು ಬಗೆಯಲಾಗಿತ್ತು ಆದರೆ ಕಾಂಗ್ರೆಸ್ ಅಧ್ಯಕ್ಷರ ಒಪ್ಪಿಗೆಯಿಂದ ಮಂತ್ರಿಮಂಡಳ ರಚಿಸಲು-ಒಪ್ಪಿಕೊಂಡ ಕರಾರುಗಳು ಶ್ಯಾಮಪ್ರಸಾದರಿಗೆ ಮಾನ್ಯವಾಗದ್ದರಿಂದ ಅವರು ಈ ಮಂತ್ರಿಮಂಡಳದಲ್ಲಿ ಸೇರಲಿಲ್ಲೆಂದು ಕಾಂಗ್ರೆಸ್ ಧುರೀಣರಾದ ಡಾ. ಘೋಷರು ತಮ್ಮ ಪ್ರಕಟನೆಯಲ್ಲಿ ಹೇಳಿರುವರು. ಸದ್ಯದ ಕಠಿಣ ಪರಿಸ್ಥಿತಿಯಲ್ಲಿ ಡಾ. ಶ್ಯಾಮಪ್ರಸಾದರು ಕೆಲ ಬಂಧನಗಳಿಗೊಳಗಾಗಿಯೂ ಮಂತ್ರಿಮಂಡಳದಲ್ಲಿ ಸೇರಿದ್ದರೆ ಒಳಿತಾಗುತಿತ್ತು. ಮಂತ್ರಿಮಂಡಳದಲ್ಲಿ ಸೇರಿರದಿದ್ದರೂ ಪ್ರಾಂತದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸುವಲ್ಲಿ ಅವರು ಮಂತ್ರಿಮಂಡಳಕ್ಕೆ ಸಂಪೂರ್ಣ ಸಹಾಯವನ್ನು ಸಲ್ಲಿಸಬೇಕೆಂದು ಬಿನ್ನವಿಸಬೇಕಾಗಿದೆ ಮಧ್ಯಂತರ ಅವಧಿಗಾಗಿ ಎಂದು ನೇಮಿಸಲ್ಪಟ್ಟ ಈ ಮಂತ್ರಿಮಂಡಳ ಮತ್ತು ಮುಸ್ಲಿಂಲೀಗ ಮಂತ್ರಿಮಂಡಳಗಳಲ್ಲಿ ಪರಸ್ಪರ ಸಹಾಯ ಸಹಕಾರ ದೊರೆತು ಪ್ರಾಂತದಲ್ಲಿ ಸಾರ್ವತ್ರಿಕ ಶಾಂತಿ, ಸುವ್ಯವಸ್ಥೆ ನೆಲಗೊಳ್ಳಲೆಂದೇ ಎಲ್ಲರೂ ಹಾರಯಿಸಬಹುದಾಗಿದೆ. ಆ ಬಗೆಯ ಶಾಂತಿಯನ್ನು ಪ್ರಸ್ಥಾಪಿಸುವಲ್ಲಿಯೆ ಮಂತ್ರಿಮಂಡಳಗಳು, ಅಧಿಕಾರಿಗಳು ಮತ್ತು ಜನತೆ ತಮ್ಮ ಲಕ್ಷ್ಯವನ್ನು ಪೂರಯಿಸಬೇಕೆಂದು ಆಗ್ರಹಪಡಿಸುತ್ತೇವೆ.

## ದುರುಪಯೋಗವಾಗದಿರಲಿ

ಸರಹದ್ದದಲ್ಲಿ ನಡೆಯಲಿರುವ ಸಾರ್ವತ್ರಿಕ ಮತಗಣನೆಯಲ್ಲಿ ಭಾಗವಹಿಸಬಾರದೆಂದು ಕಾಂಗ್ರೆಸ್, ಖುದಾಯಿ ಖಿದಮತಗಾರ ಮೊದಲಾದ ಸಂಸ್ಥೆಯವರು ನಿರ್ಣಯಿಸಿರುವರಷ್ಟೆ. ಹೀಗೆ ಮಾಡುವದು ನ್ಯಾಯ್ಯವೆಂದು ಸರಹದ್ದ ಗಾಂಧಿ, ಮುಖ್ಯಮಂತ್ರಿ ಡಾ. ಖಾನಸಾಹೇಬ ಮತ್ತು ಮಹಾತ್ಮಾ ಗಾಂಧಿಯವರು ಹೊರಡಿಸಿದ ಪ್ರಕಟನೆಗಳಿಂದ, ಮಾಡಿದ ಭಾಷಣಗಳಿಂದ ಸ್ಪಷ್ಟವಾಗುವದು. ಬಲೂಚಿಸ್ತಾನಕ್ಕೆ ಕೊಟ್ಟಂತೆ ಸರಹದ್ದಪ್ರಾಂತಕ್ಕಾದರೂ ಸ್ವಾತಂತ್ರ್ಯ ಸ್ವಾಯತ್ತತೆ ಮೊದಲಾದ್ದರ ಆಶ್ವಾಸನ ಕೊಟ್ಟಿದ್ದರೆ ಸರಹದ್ದಪ್ರಾಂತದವರಾದರೂ ಈ ಮತಗಣನೆಯ ಸಂಬಂಧದಲ್ಲಿ ಆ ದೃಷ್ಟಿಯಿಂದ ವಿಚಾರ ಮಾಡುತಿದ್ದರು. ಆದರೆ ಬ್ಯಾ. ಜಿನ್ನಾ ಮತ್ತು ಸರಹದ್ದಗಾಂಧಿಯವರಲ್ಲಿ ನಡೆದ ಮಾತುಕತೆಗಳಲ್ಲಿ ಅವಶ್ಯಕ ಆಶ್ವಾಸನ ಸಿಕ್ಕದಿದ್ದುದರಿಂದ ಸರಹದ್ದಗಾಂಧಿಯವರು ಮತಗಣನೆಯನ್ನೇ ಬಹಿಷ್ಕರಿಸಬೇಕೆಂದು ನಿರ್ಧರಿಸಿರುವರು ಈ ಪರಿಸ್ಥಿತಿಯಲ್ಲಿ ಸರಹದ್ದದಲ್ಲಿ ಮತಗಣನೆಯ ಕಾಲಕ್ಕೆ ಯಾವದೇ ಬಗೆಯ ದುರ್ಘಟನೆಗಳಾಗದಂತೆ ನೋಡಿಕೊಳ್ಳುವದು ಕರ್ತವ್ಯವಾಗಿದೆ. ಮತಗಳನ್ನು ಹಾಕಲು ಜನತೆಯನ್ನು ಒತ್ತಾಯಪಡಿಸುವದು, ಬೆದರಿಕೆ ಹೆದರಿಕೆಗಳನ್ನು ಹಾಕುವದು ಮೊದಲಾದ್ದು ನಡೆಯದಂತೆ ನೋಡಿಕೊಳ್ಳುವದು ಅಧಿಕಾರಿಗಳ ಕರ್ತವ್ಯವಾಗಿದೆ. ಗವರ್ನರ ಜನರಲ್‌ರು ಈ ಸಂಬಂಧದಲ್ಲಿ ಆರ್ಡಿನನ್ಸೊಂದನ್ನು ಹೊರಡಿಸಿ ಸಂಶಯ ಬಂದವರನ್ನು ಸೆರೆಹಿಡಿಯಲು ಝಡತಿ ನಡೆಸಲು ಮೊದಲಾದ ಅಧಿಕಾರವನ್ನು ಕಮಿಶನರ ಅಧಿಕಾರಿಗಳು ಮೊದಲಾದವರಿಗೆ ಕೊಟ್ಟಿದ್ದಾರೆ. ಶಾಂತರೀತಿಯಿಂದ ಮತಗಣನೆ ನಡೆಯಬೇಕೆಂಬ ಉದ್ದೇಶದಿಂದಲೆ ಗವರ್ನರ ಜನರಲ್‌ರು ಈ ಆರ್ಡಿನನ್ಸು ಹೊರಡಿಸಿದ್ದಾರಂತೆ. ಅಲ್ಲದೆ ಸೈನ್ಯಾಧಿಕಾರಿಗಳ ನೇತೃತ್ವದಲ್ಲಿಯೆ ಮತಗಣನೆ ನಡೆಯುವಂತೆ ಯೋಜಿಸಲಾಗಿದೆ. ಈ ಸಂದರ್ಭದಲ್ಲಿ ಸೈನ್ಯಾಧಿಕಾರಿಗಳ ಮೇಲೆ ಬಹಳ ಹೊಣೆಯಿದೆಂದು ಬೇರೆ ಹೇಳಬೇಕಿಲ್ಲ ಈ ಆರ್ಡಿನನ್ಸಿನನ್ವಯ ತಮಗೆ ದೊರೆತ ಅಧಿಕಾರದ ದುರುಪಯೋಗವಾಗದಂತೆ ನೋಡಿಕೊಳ್ಳುವದು ಅವರ ಕರ್ತವ್ಯವಾಗಿದೆ. ಮತಗಣನೆಯಲ್ಲಿಯೂ ಯಾವದೇ ಬಗೆಯ ಮೋಸವಾಗದಂತೆ ಎಚ್ಚರಪಡತಕ್ಕದ್ದು. ಖುದಾಯಿ ಖಿದಮತಗಾರ ಮತ್ತು ಕಾಂಗ್ರೆಸ್ಸಿನಂಥ ಪ್ರಬಲ ಸಂಸ್ಥೆಗಳು ಬಹಿಷ್ಕಾರ ಹಾಕಿದಾಗ ಮತಗಣನೆ ನಡೆಸುವದು ಒಂದುಬಗೆಯ ಫಾರ್ಸ ಆಗಿದ್ದರೂ ಶಾಂತರೀತಿಯಿಂದ ಎಲ್ಲವೂ ಸಾಗುವಂತೆ ನೋಡಿಕೊಳ್ಳುವದು ಎಲ್ಲರ ಕರ್ತವ್ಯವಾಗಿದೆ.

# ಅಂತರರಾಷ್ಟ್ರೀಯ

## ಇಂಡೋನೇಶಿಯನ್ ಬಿಕ್ಕಟ್ಟು

ಇಂಡೋನೇಶಿಯಾದ ಎಳೆಯ ಪ್ರಜಾ ರಾಜ್ಯದ ಆಕಾಶದಲ್ಲಿ ಬಿಕ್ಕಟ್ಟಿನ ಕಾರ್ಮೋಡಗಳೂ ಯುದ್ಧದ ಬಿರುಗಾಳಿಯೂ ಕಾಣಿಸಿಕೊಳ್ಳತೊಡಗಿವೆ. ಅನೇಕ ವಾರಗಳಿಂದ, ಡಚ್ಚರಿಗೂ ಪ್ರಜಾರಾಜ್ಯ ಸರಕಾರಕ್ಕೂ ನಡೆದ, ಇಂಡೊನೇಶಿಯಾದಲ್ಲಿ ೧೯೪೯ ಜನವರಿಯಿಂದ ಸ್ಥಾಪಿಸಲ್ಪಡಬೇಕಾದ ಸರ್ವತಂತ್ರ ಸ್ವತಂತ್ರ ಅಖಿಲ ಇಂಡೋನೇಶಿಯಾ ಸಂಯುಕ್ತ ರಾಜ್ಯಭಾರಕ್ಕೆ ಪೂರ್ವಭಾವಿಯಾಗಿ "ನಡುಗಾಲ ಸರಕಾರ"ವೊಂದನ್ನು ಅಸ್ತಿತ್ವಕ್ಕೆ ತರುವ ಸಂಬಂಧದ ಮಾತುಕತೆಗಳು ಈಗ ಅತ್ಯಂತ ಸೂಕ್ಷ್ಮಸ್ಥಿತಿಗೆ ಮುಟ್ಟಿವೆ. ಮೇ ೨೭ ಕ್ಕೆ ಡಚ್ಚರು ಪ್ರಜಾರಾಜ್ಯ ಸರಕಾರಕ್ಕೊಂದು ಕೊನೆಯ ಎಚ್ಚರಿಕೆಯೊಡನೆ ನಡುಗಾಲ ಸರಕಾರದ ತಮ್ಮ ಯೋಜನೆಯನ್ನು ಕಳಿಸಿದರು. ೧೪ ದಿನಗಳ ಅವಧಿಯಲ್ಲಿ ಅದನ್ನು ಸ್ವೀಕರಿಸದಿದ್ದರೆ "ಬೇರೆ ಉಪಾಯ" ಕೈಕೊಳ್ಳುವ ಬೆದರಿಕೆಯೂ ಅದರಲ್ಲಿ ಅಡಕವಾಗಿತ್ತು. ಇಂಡೋನೇಶಿಯನ್ ಸಂಯುಕ್ತ ರಾಜ್ಯಸ್ಥಾಪನೆಯ ಪೂರ್ವಭಾವಿಯಾಗಿ ನಡುಗಾಲ ಸರಕಾರವನ್ನು ಅಸ್ತಿತ್ವಕ್ಕೆ ತರುವ ತತ್ವವನ್ನು ಒಪ್ಪಿದರೂ ಆ ನಡುಗಾಲ ಸರಕಾರದಲ್ಲಿ ಡಚ್ ಪ್ರಭಾವವನ್ನು ಶಾಶ್ವತಗೊಳಿಸುವ ಡಚ್ ಸೂಚನೆಗಳಿಗೆ ಪ್ರತಿಸೂಚನೆಗಳನ್ನು ಪ್ರಜಾರಾಜ್ಯ ಸರಕಾರ ಕಳಿಸಿತು. ಆದರೆ ಇಂಡೊನೇಶಿಯಾದಲ್ಲಿ ಸಾಕಷ್ಟು ಸೈನ್ಯಬಲವನ್ನು ಸಂಗ್ರಹಿಸಿದ್ದ ಡಚ್ಚರು ತಮ್ಮ ಹಟವನ್ನೆ ಸಾಧಿಸಿದ್ದರಿಂದ ಉಭಯ ಪಕ್ಷಗಳು ಹೊಸ ಹೋರಾಟದ ಸಿದ್ಧತೆ ನಡೆಸಿದವು. ಇಂಡೊನೇಶಿಯಾ ಪ್ರಜಾರಾಜ್ಯದ ಮುಖ್ಯ ಮಂತ್ರಿ ಡಾ. ಸುಲ್ತಾನ ಶಹರೀರರು ಡಚ್ಚರ ಯೋಜನೆಯ ವಿಚಾರ್ಯಾಲು ಮೂರ್ವಿಗೀಸ ಅಂಶಕ್ಕೆ ಒಪ್ಪಿಯಾದರೂ ಶಾಂತಿಯನ್ನು ಕಾಯ್ದುಕೊಳ್ಳಲು ಪ್ರಯತ್ನಿಸಿದರು. ಡಚ್ಚರು ಒಂದು ಬಗೆಯ ಪೂರ್ಣ ಶರಣಾಗತಿಯನ್ನೆ ಅಪೇಕ್ಷಿಸಿದ್ದರಿಂದ ಪರಿಸ್ಥಿತಿ ವಿಕೋಪಕ್ಕೆ ಮುಟ್ಟಿತು.

ಇತ್ತ ಇಂಡೋನೇಶಿಯನ್ ಪ್ರಜಾರಾಜ್ಯ ವರ್ಗಗಳಲ್ಲಿ ಡಾ. ಶಹರೀರರು ಡಚ್ಚರಿಗೆ ಮಣಿದದ್ದು ಹೆಚ್ಚಾಯಿತೆಂಬ ಅಸಂತುಷ್ಟಿ ಬೆಳೆದುದರಿಂದ ಅವರ ಮಂತ್ರಿಮಂಡಲದಲ್ಲಿ ಬಿಕ್ಕಟ್ಟುಂಟಾಗಿ ಅವರು ರಾಜೀನಾಮೆ ಕೊಡಬೇಕಾಗಿ ಬಂತು. ಎಡ ಪಕ್ಷದ ತೀವ್ರ ವಿರೋಧ ಅವರನ್ನು ಉರುಳಿಸಿತು. ಪ್ರಜಾರಾಜ್ಯದ ಅಧ್ಯಕ್ಷರಾದ ಡಾ. ಸೊಕರ್ನೋ ಅವರು ಸಂಪೂರ್ಣ ಅಧಿಕಾರವನ್ನು ಕೈಯಲ್ಲಿ ತೆಗೆದುಕೊಂಡರು. ಆದರೆ ಹೊಸತಾಗಿ ಬೇರೆ ಮಂತ್ರಿಮಂಡಲವನ್ನು ರಚಿಸುವದು ಸಾಧ್ಯವಾಗಿಲ್ಲ. ಸಂಪೂರ್ಣ ಅಧಿಕಾರ ಕೊಡದೆ ಸರಕಾರ ರಚಿಸಲು ಡಾ. ಶಹರೀರರು ಸಿದ್ಧರಿಲ್ಲ.

ಎಡ ಪಕ್ಷಗಳ ಒಪ್ಪಿಗೆ ಪಡೆದು ಅಧ್ಯಕ್ಷ ಸೊಕರ್ನೋ ಅವರು, ಶಹರೀರರು ಕೈಕೊಂಡ ನಿರ್ಣಯಗಳಿಗೆ ಸಮ್ಮತಿ ಕೊಟ್ಟು ಮೇ ೨೭ ರ ಡಚ್ ಸೂಚನೆಗಳ ಮುಖ್ಯಾಂಶಗಳನ್ನೊಪ್ಪುವದಾಗಿ ತಿರುಗಿ ರಾಯಸ ಕಳಿಸಿದರು. ಆದರೆ ಒಂದು ವಿಷಯ ಮಾತ್ರ ಇಂಡೊನೇಶಿಯನ್ನರು ಬಲಿಗೊಡಲು ಸಿದ್ಧರಿಲ್ಲ: ಪ್ರಜಾರಾಜ್ಯಕ್ಕೆ ಸೇರಿದ ಪ್ರದೇಶದ ಅಂತರಿಕ ಶಾಂತಿ ಸುವ್ಯವಸ್ಥೆಯನ್ನು ಕಾಯುವಲ್ಲಿ ಡಚ್ಚರಿಗೂ ಪಾಲುಬೇಕು, ಮತ್ತು ಪ್ರಜಾರಾಜ್ಯದ ಸೈನ್ಯದ ನಿಯಂತ್ರಣದ ಹೊಣೆ ಡಚ್ ಪ್ರಜಾರಾಜ್ಯ ಇವರಲ್ಲಿ ಸಂಯುಕ್ತವಾಗಿರಬೇಕೆಂಬ ಡಚ್ಚರ ಬೇಡಿಕೆಯನ್ನು ಪ್ರಜಾರಾಜ್ಯ ಸರಕಾರ ಮನ್ನಿಸುವದಿಲ್ಲ. ಅಂತರಿಕ ವಿಷಯದಲ್ಲಿ ಕೈಹಾಕಲು ಡಚ್ಚರಿಗೆ ಅವಕಾಶವೀಯಲು ಅವರು ಒಪ್ಪಲಾರರು.

## ಡಚ್ಚರ ಯುದ್ಧಯೋಜನೆ

ಮಂತ್ರಿ ಮಂಡಲ ಬಿಕ್ಕಟ್ಟಿನ ನಡುವೆ ಸಂಧಾನ ನಡೆಯುತ್ತಿದ್ದಂತೆ ಇತ್ತ ಒಮ್ಮಿಂದೊಮ್ಮೆ ಇಂಡೋನೇಶಿಯನ್ ಅಧಿಕಾರಿಗಳಿಗೆ ಡಚ್ಚರ ಒಳಸಂಚೊಂದು ಕಣ್ಣಿಗೆ ಬಿತ್ತು. ಇಂಡೋನೇಶಿಯಾದಲ್ಲಿ ಸೋಮವಾರ (ತಾ. ೩೦ ಜೂನ) ನಸುಕಿನಲ್ಲಿ ಪ್ರಜಾರಾಜ್ಯ ಸೈನ್ಯದ ಮೇಲೆ ಡಚ್ ಪಡೆಗಳು ದಾಳಿಯನ್ನು ಪ್ರಾರಂಭಿಸಬೇಕೆಂಬ ಗುಪ್ತ ಪರಿಪತ್ರ ಕಳಿಸಲ್ಪಟ್ಟದ್ದು ಇಂಡೋನೇಶಿಯನ್ನರಿಗೆ ಸಿಕ್ಕಿತು. ಒಡನೆ ಪ್ರಜಾರಾಜ್ಯ ಸರಕಾರ ಈ ಅಹ್ವಾನವನ್ನೆದುರಿಸಲು ಅಣಿಯಾಗಿ ಡಚ್ಚರು ಒಳಸಂಚು ಮಾಡಿದ್ದರಿಂದ ಸಂಧಾನ ಮುರಿಯಿತೆಂದು ಸಾರಿತು. ಪ್ರಜಾರಾಜ್ಯ ಸೈನ್ಯಕ್ಕೆ ಸಿದ್ಧವಾಗಿರಲು ಅಜ್ಞೆಗಳು ಹೋದವು. ಡಚ್ಚರು ಏರಿಬಂದರೆ ಪ್ರತಿಕಾರ ಮಾಡಲು ಸೂಚಿಸಲಾಯಿತು.

ಆದರೆ ದಾಳಿ ಮಾಡುವ ಅಜ್ಞೆಯನ್ನು ಕೊಟ್ಟದ್ದು ತನಗೇ ಗೊತ್ತಿಲ್ಲವೆಂದು ಡಚ್ಚ ಸರಕಾರ ಸಾರಿತು!

## ಅಂಗ್ಲೋ—ಅಮೇರಿಕನ್ ತಂತ್ರ

ದೊಡ್ಡ ಪ್ರಮಾಣದ ಯುದ್ಧ ಅನಿವಾರ್ಯವೆಂದು ತೋರುತಿದ್ದಾಗ ಅಮೇರಿಕೆ ಇದರಲ್ಲಿ ಕೈಹಾಕಿದ್ದರಿಂದ ಪರಿಸ್ಥಿತಿ ಸ್ವಲ್ಪ ಸಡಿಲಾಯಿತು. ಬೇಗನೆ ನಡುಗಾಲ ಸರಕಾರ ಸ್ಥಾಪಿಸಿ ಶಾಂತ ವಾತಾವರಣವನ್ನು ಕಲ್ಪಿಸಬೇಕೆಂಬ ಡಚ್ ಸೂಚನೆಗೆ ಅಮೇರಿಕನ್ ವಿದೇಶ ಖಾತೆ ಬೆಂಬಲ ಕೊಟ್ಟದ್ದಲ್ಲದೆ ಡಚ್ ಸೂಚನೆಗಳನ್ನೊಪ್ಪಿದರೆ ಪ್ರಜಾರಾಜ್ಯ ಸರಕಾರಕ್ಕೆ ಆರ್ಥಿಕ ಪುನರ್ಘಟನೆಗಾಗಿ ದೊಡ್ಡ ಸಾಲ ಕೊಡುವದಾಗಿ ತಿಳಿಸಿತು. ಈ ಸಾಲವನ್ನು ಇಂಡೊನೇಶಿಯನ್ನರು ಬೇಡಿ ಒಂದು ವರ್ಷ ಮೇಲಾಯಿತು. ಈಗ ಒಮ್ಮಿಂದೊಮ್ಮೆ ಅಮೇರಿಕೆಗೆ ಆ ಅರ್ಜಿಯ ನೆನಪು ಬಂದಿದೆ. ಬ್ರಿಟಿಶ ಸರಕಾರವೂ ಅಮೇರಿಕನ್ ಸೂಚನೆಗೆ ಬೆಂಬಲ ಕೊಟ್ಟಿದೆ.

ಈಚೆಗೆ ಡಚ್ಚರ ದಿಟ್ಟತನ ಬೆಳೆಯಲು ಅಮೇರಿಕೆಯ ಬೆಂಬಲವೇ ಕಾರಣವೆಂಬ ಶಂಕೆ ಇದ್ದೇ ಇತ್ತು. ಇಂಡೋನೇಶಿಯಾದ ಎಣ್ಣೆಗಣಿಗಳಲ್ಲಿ ಅಮೇರಿಕೆಯ ಹಿತಸಂಬಂಧ ಹೆಣೆದುಕೊಂಡಿದೆಯೆಂಬದನ್ನು ನಾವು ಮರೆಯತಕ್ಕದ್ದಲ್ಲ. ಡಚ್ ಸಾಮ್ರಾಜ್ಯ ನಾಮಶೇಷವಾಗುವದು ಬ್ರಿಟಿಶರಿಗೂ ಅಷ್ಟು ಹಿತಕರವಲ್ಲ. ಸ್ವಾತಂತ್ರ್ಯವಾದಿ ಇಂಡೊನೇಶಿಯನ್ನರ ಕೈಗೆ ಪೂರ್ಣ ಅಧಿಕಾರ ಹೋದರೆ ಅಂಗ್ಲೊ—ಅಮೇರಿಕನ್ ಹಿತಸಂಬಂಧಗಳಿಗೆ ಅಷ್ಟು ಮುಕ್ತದ್ವಾರ ದೊರೆಯಲಾರದು. ಅದರಿಂದ ಅವರು ಒಂದು ಕೈಯಲ್ಲಿ ಯುದ್ಧ ಇನ್ನೊಂದರಲ್ಲಿ ರೊಕ್ಕ ಹಿಡಿದು ಇಂಡೊನೇಶಿಯನ್ನರನ್ನು ಬೆದರಿಸುತಿದ್ದಾರೆನ್ನಬಹುದು.

ಸದ್ಯಕ್ಕೆ ಪರಿಸ್ಥಿತಿ ನಿಚ್ಚಳವಾಗಿಲ್ಲ. ಸಾಲಕ್ಕೆ ಮನಸೋತು, ಮತ್ತು ಹೋರಾಟದಿಂದೊದಗುವ ಅಮಿತ ಬಲಿದಾನವನ್ನು ನೆನೆದು ಇಂಡೊನೇಶಿಯನ್ನರು ಅಂಗ್ಲೋ—ಅಮೇರಿಕನ್ ಒತ್ತಾಯಕ್ಕೆ ಬಗ್ಗುವರೊ? ಆದರೆ ಇತ್ತ ಡಚ್ ಪಡೆಗಳಿಗೂ ಪ್ರಜಾರಾಜ್ಯವಾದಿ ಸೈನ್ಯಕ್ಕೂ ಸೋಮವಾರ ೫ ತಾಸುಗಳ ಘನಘೋರ ಕದನ ನಾಯಿತೆಂದು ಸುದ್ದಿ ಬಂದಿದೆ. ಇನ್ನು ಕೆಲವೇ ದಿನಗಳಲ್ಲಿ ಅಗ್ನೇಯ ಏಶಿಯಾದಲ್ಲಿ ಶಾಂತಿ—ಅಶಾಂತಿಗಳ ನಿರ್ಣಯವಾಗುವದು ನಿಶ್ಚಿತ.

## ಚೀನದಲ್ಲಿ ಗಂಡಾಂತರ ಪರಿಸ್ಥಿತಿ

ಚೀನದ ಅಂತರಿಕ ಪರಿಸ್ಥಿತಿ ದಿನದಿನಕ್ಕೆ ಕೆಡುತಿದೆ. ಅಮೇರಿಕನ್ ಬೆಂಬಲವೊಂದಲ್ಲದಿದ್ದರೆ ಚಿಯಾಂಗ ಕೈಶೇಕರ ನ್ಯಾಂಕಿಂಗ್ ಸರಕಾರ ಎಂದೋ ಕುಸಿದುಬೀಳುತಿತ್ತು. ಯೆನಾನದಿಂದ ಕಮ್ಯುನಿಸ್ಟರನ್ನು ಉಚ್ಚಾಟನಗೊಳಿಸಿದ ಬಳಿಕ ಚಿಯಾಂಗರಿಗೆ ಕಮ್ಯುನಿಸ್ಟರ ವಿರುದ್ಧ ದೊಡ್ಡ ವಿಜಯ ದೊರೆತಿಲ್ಲ. ಬದಲಿಗೆ ಉತ್ತರ ಪ್ರಾಂತಗಳಲ್ಲಿಯೂ ಮಂಚೂರಿಯಾದಲ್ಲಿಯೂ ಕಮ್ಯುನಿಸ್ಟರ ಕೈಯೇ ಮೇಲಾಗುತಿತ್ತು. ಇತ್ತ ಅರ್ಥಿಕ ಅಧೋಗತಿಯನ್ನಂತೂ ಹೇಳತೀರದು. ನೋಟುಗಳ ಚಲಾವಣೆಗೆ ಮಿತಿಯೇ ಇಲ್ಲ. ಉತ್ಪಾದನೆಯನ್ನು ಹೆಚ್ಚಿಸುವದಾಗಲಿ ಕಾರಖಾನೆಗಳನ್ನು ಪುನರುಜ್ಜೀವನಗೊಳಿಸುವದಾಗಲಿ ಸರಕಾರಕ್ಕೆ ಸಾಧ್ಯವೇ ಆಗಲಿಲ್ಲ. ಎಲ್ಲಿಯವರೆಗೆಂದರೆ ಯುಕ್ತರಾಷ್ಟ್ರ ಸಮಿತಿಯವರು ಕೊಟ್ಟ ಸಂಕಷ್ಟ ನಿವಾರಣೆಯ ಉಚಿತ ವಸ್ತುಗಳನ್ನು ಕೂಡ ಸರಕಾರ ಮಾರಿ ತಿಂದಿತು!

ಇಂಥ ಪ್ರಸಂಗದಲ್ಲಿ ವಿದೇಶಿ ಸಹಾಯವಿಲ್ಲದೆ ಬಾಳುವದೇ ಸರಕಾರಕ್ಕೆ ಅಸಾಧ್ಯವೆನಿಸಿದೆ. ಅದಕ್ಕಾಗಿ ಕಮ್ಯುನಿಸ್ಟರಿಗೆ ರಶಿಯಾದ ಸಹಾಯ ದೊರೆಯುತಿದೆಯೆಂಬ ದೊಡ್ಡ ಪ್ರಚಾರತಂತ್ರವನ್ನು ಪ್ರಾರಂಭಿಸಿದ್ದಲ್ಲದೆ ಸಿಂಕಿಯಾಂಗ ಗಡಿಯಲ್ಲಿ ಹೊರ ಮಂಗೋಲಿಯನ್ನರಿಗೂ ಚೀನಿಯರಿಗೂ ಆದ ತಿಕ್ಕಾಟಕ್ಕೆ ಮಹತ್ವಕೊಟ್ಟು ಪ್ರಚಾರ ನಡೆಯಿತು. ಅಮೇರಿಕೆಯ ಸಹಾಯವಿಲ್ಲದೆ ಸಾಧ್ಯವಿಲ್ಲವೆಂದೂ ಸೂಚಿಸಲಾಯಿತು. ಆದರೆ ಕ್ವಾಂಟುಂಗಿನ ಹಿಂದಿನ ಸೇನಾಪತಿ ಲಿಂಚಿ ಮೊದಲಾದವರು ಹೊರಗಿನ ಸಹಾಯವೆಂಬುದೆ ಚೀನಿ ಒಂತರ್ಯುದ್ಧಕ್ಕೆ ಇನ್ನಷ್ಟು ಉತ್ತೇಜನ ಕೊಟ್ಟಂತಾಗುವದರಿಂದ ಚಿಯಾಂಗರಿಗೆ ಸಾಲ ಕೊಡಬಾರದೆಂದು ಸಾರಿದ್ದಾರೆ. ಅದರೂ ಅಮೇರಿಕನ್ ಬ್ಯಾಂಕೊಂದು ೫೦ ಕೋಟಿ ಡಾಲರ ಸಾಲ ಕೊಟ್ಟಿದೆ. ಅಲ್ಲದೆ ಚಿಯಾಂಗರಿಗೆ ಅಮೇರಿಕನ್ ಶಸ್ತ್ರಾಸ್ತ್ರಗಳನ್ನು ಮಾರಲು ಅಜ್ಞಾಪಿಸಲಾಗಿದೆ. ಇದರಿಂದ ಚೀನಿ—ರಶಿಯನ್ ಸಂಬಂಧ ದಿನದಿನಕ್ಕೆ ಕೆಡುತಿದೆ. ಅವೆರಡು ರಾಷ್ಟ್ರಗಳ ನಡುವೆ ಆದ ಸ್ನೇಹಒಪ್ಪಂದದಲ್ಲಿನ ಡಾಯರೆನ್ ಮತ್ತು ಅರ್ಥರ ಬಂದರಗಳ ಸಂಬಂಧದ ಕರಾರುಗಳ ಬಗ್ಗೆ ವಿವಾದ ಉತ್ಪನ್ನವಾಗಿದೆ. ಚಿಯಾಂಗರಿಗೆ ಅಮೇರಿಕೆಯ ಸಹಾಯ ದೊರೆತದ್ದಕ್ಕೆ ಪ್ರತಿಯಾಗಿ ಆ ಎರಡು ಬಂದರಗಳ ಮೂಲಕ ರಶಿಯನ್ನರು ಚೀನಿ ಕಮ್ಯುನಿಸ್ಟ್ ಸೈನ್ಯಗಳನ್ನೂ ಅವರಿಗೆ ಬೇಕಾದ ಯುದ್ಧಸಾಮಗ್ರಿಗಳನ್ನೂ ಸಾಗಿಸುತಿದ್ದಾರೆಂದು ತಿಳಿಯುತ್ತದೆ. ಹೀಗೆ ಚೀನದ ಅಂತರಿಕ ಹೋರಾಟ ಅಂತರ್ರಾಷ್ಟ್ರೀಯ ಕುಟ್ಟೆಕ್ಕೇರಿದೆ. ಅತ್ತ ಬಡ ಚೀನಿ ಜನಸಾಮಾನ್ಯರ ಸಂಕಷ್ಟಕ್ಕೆ ಮೇರೆಯೇ ಇಲ್ಲ. "ಸ್ಟೇಟ್ಸ್‌ಮನ್" ಸಂಪಾದಕರು ಹೇಳುವಂತೆ ಅವರ ಸಹನಶಕ್ತಿಗೂ ಸೀಮೆಯಿಲ್ಲವೇನೊ!

## ಪ್ಯಾರೀಸ ಮಾತುಕತೆಗಳು

ಅಮೇರಿಕನ್ ವಿದೇಶ ಮಂತ್ರಿ ಜಾರ್ಜ ಮಾರ್ಶಲ್ಲರ "ಯುರೋಪಿನ ಉದ್ಧಾರ"ದ ಯೋಜನೆಯನ್ನು ಕಾರ್ಯಕಾರಿ ಮಾಡುವ ವಿಚಾರದಲ್ಲಿ ಪ್ಯಾರೀಸಿನಲ್ಲಿ ಸೇರಿದ ಬ್ರಿಟಿಶ—ಫ್ರೆಂಚ—ರಶಿಯನ್ ವಿದೇಶ ಮಂತ್ರಿಗಳ ಸಭೆ (ತಾ. ೨೭ ರಿಂದ) ಉಳಿದ ಅನೇಕ ಅಂತರ್ರಾಷ್ಟ್ರೀಯ ಸಭೆ ಸಮ್ಮೇಲನಗಳ ದಾರಿಯನ್ನೆ ಹಿಡಿಯಬಹುದೆಂಬ ಸಂಶಯಕ್ಕೆ ಪುಷ್ಟಿ ದೊರೆಯುತಿದೆ. ಬ್ರಿಟಿಶ ಮತ್ತು ಫ್ರೆಂಚ ವಿದೇಶ ಮಂತ್ರಿಗಳಾದ ಬೆವಿನ್ ಮತ್ತು ಬಿದಾಲರು ಮುಂದೊಡ್ಡಿದ ಯೋಜನೆಯನ್ನು ರಶಿಯನ್ ವಿದೇಶ ಮಂತ್ರಿ ಮೊಲಟೋವರು ವಿರೋಧಿಸಿ ತಮ್ಮದೇ ಯೋಜನೆಯನ್ನು ಮುಂದೊಡ್ಡಿದರು. ಅಖಿಲ ಯುರೋಪಿನ ಪುನರ್ನಿಯೋಜನೆಯ ಅವಶ್ಯಕತೆಗಳನ್ನು ನಿರ್ಣಯಿಸಿ ಅಮೇರಿಕೆಯ ಸಹಾಯವನ್ನು ವಿನಿಯೋಗಿಸಲು ತ್ರಿರಾಷ್ಟ್ರ ಮತ್ತು ಇತರ ಒಂದೆರಡು ಯುರೋಪಿಯನ್ ರಾಷ್ಟ್ರಗಳನ್ನೊಳಗೊಂಡ ಒಂದು ನಿರ್ದೇಶಕ ಸಮಿತಿಯನ್ನು ಸ್ಥಾಪಿಸಬೇಕೆಂಬದು ಅಂಗ್ಲೊ—ಫ್ರೆಂಚ ಯೋಜನೆಯಾದರೆ ಈ ತ್ರಿರಾಷ್ಟ್ರಗಳಿಗೆ ವಿವಿಧ ದೇಶಗಳ ಅವಶ್ಯಕತೆಗಳನ್ನು ಗೊತ್ತುಪಡಿಸುವ ಹಕ್ಕಿಲ್ಲವೆಂದೂ ಆಯಾ ರಾಷ್ಟ್ರಗಳೇ ತಮ್ಮ ಅವಶ್ಯಕತೆಗಳನ್ನು ಗೊತ್ತುಪಡಿಸಬೇಕೆಂದೂ ರಶಿಯನ್ ವಾದ. ಇಲ್ಲದಿದ್ದರೆ ಹಿರಿ ರಾಷ್ಟ್ರಗಳಿಗೆ ಕಿರಿಯವುಗಳ ಮೇಲೆ ತಮ್ಮ ಇಚ್ಛೆಯನ್ನು ಹೇರುವ ಅವಕಾಶ ದೊರೆಯುವದೆಂದು ಅವರು ಭಯ ಪಡುತ್ತಾರೆ. ಸಮಿತಿಯೊಂದು ಬೇಕೆಂದು ಅವರ ಅಭಿಪ್ರಾಯವಿದ್ದರೂ ಅದರ ಸ್ವರೂಪ ಬೇರೆಯೆ ಬಗೆಯಾಗಿರಬೇಕೆಂದು ಅವರು ಹೇಳುತ್ತಾರೆ. ರಶಿಯನ ಪತ್ರಿಕೆಗಳು ಬ್ರಿಟಿಶ ಫ್ರೆಂಚ ಯೋಜನೆಯನ್ನು ಖಂಡಿಸಿ ಇದು ಚಿಕ್ಕ ದುರ್ಬಲ ರಾಷ್ಟ್ರಗಳಿಗೆ ಹಣದ ಆಸೆ, ಬೆದರಿಕೆಯನ್ನು ತೋರಿಸಿ ಯುರೋಪಿನಲ್ಲಿ ಬ್ರಿಟಿಶ ಮುಂದಾಳ್ತನವನ್ನೂ ಅಮೇರಿಕನ್ ಹಣದ ಸಾಮ್ರಾಜ್ಯವನ್ನೂ ಸ್ಥಾಪಿಸುವ ಯೋಜನೆಯೆಂದು ಸಾರಿವೆ. ಅಮೇರಿಕೆಯ ಸ್ವಾರ್ಥ ಸಾಧಕ ಯೋಜನೆಯಿದೆಂಬ ಆರೋಪದಿಂದ ಸಿಡಿದೆದ್ದ ಜಾರ್ಜ ಮಾರ್ಶಲ್ಲರು ಇದು ದುಷ್ಪ್ರಚಾರವೆಂದು ಸಾರಿದರು. ಅಮೇರಿಕನ್ ಪ್ರಭಾವಕ್ಕೆ ರಶಿಯನ್ನರೂ ಇವರದಕ್ಕೆ ಅವರೂ ತಡಹಾಕಬೇಕೆಂದು ಟೊಂಕ ಕಟ್ಟಿರುವದರಿಂದ ಈ ಸಭೆ ಅಯಶಸ್ವಿಯಾಗಿ ಪಶ್ಚಿಮ ಮತ್ತು ಪೂರ್ವ ಯುರೋಪುಗಳೆಂದು ಎರಡು ಹೋಳುಗಳಾಗುವ ಗಂಡಾಂತರ ಹೆಚ್ಚಾಗಿದೆ.

## ಫ್ರಾನ್ಸು ಕಲಿಯಲೊಲ್ಲದು

ಯುದ್ಧಪೂರ್ವದ ರಾಜಕೀಯ ತಿಕ್ಕಾಟ ಅನೈಕ್ಯಗಳ ಫಲವನ್ನು ಧಾರಾಳವಾಗಿ ಅನುಭವಿಸಿದ ಫ್ರಾನ್ಸು ಅದರ ಪಾಠವನ್ನು ಇನ್ನೂ ಕಲಿಯಲೊಲ್ಲದಾಗಿದೆ. ವಿಟನಾಮದ ಮೇಲೆ ಯುದ್ಧ ಸಾಗಿಸಲು ಹಣ ಮಂಜೂರು ಮಾಡುವದು, ಮತ್ತು ಕೂಲಿಕಾರರ ಸಂಬಳ ಹೆಚ್ಚಿಸುವದು ಈ ವಿಷಯಗಳಲ್ಲಿ ಆದ ಮತಭೇದದ ಫಲವಾಗಿ ಫ್ರಾನ್ಸಿನ ಅತಿದೊಡ್ಡ ರಾಜಕೀಯ ಪಕ್ಷವಾದ ಕಮ್ಯೂನಿಸ್ಟರನ್ನು ಸರಕಾರದಿಂದ ಹೊರ ಹಾಕಿದ ಸಾಮ್ಯವಾದಿ ಮುಖ್ಯಮಂತ್ರಿ ರಮೇಡಿಯರರು ಕ್ಷಣಕಾಲ ನಿಶ್ಚಿಂತರಾಗುವಂತಿಲ್ಲ. ಹೋಟಾರ ಕೂಲಿಕಾರರಿಗೆ ಹೆಚ್ಚಿನ ಕೂಲಿಯನ್ನು ಅವರು ಕೊಡಲೇ ಬೇಕಾಯಿತು. ಈ ಆಹಾರ ಮತ್ತು ಇತರ ನಿತ್ಯೋಪಯೋಗಿ ವಸ್ತುಗಳ ಕೊರತೆಯನ್ನು ಎದುರಿಸಲು ಅವರ ಸೂಚನೆಯ ಮೇರೆಗೆ "ಮಿತಭೋಜನ" ಕಾಯಿದೆಯನ್ನು ಶಾಸನ ಸಭೆ ಪಾಸು ಮಾಡಿತು. ಕಮ್ಯುನಿಸ್ಟರ ವಿರೋಧವನ್ನು ಸೋಲಿಸಿ ೩೦೨ ವಿರುದ್ಧ ೨೬೧ ಮತಗಳಿಂದ ಈ ಕಾಯಿದೆ ಪಾಸಾದರೂ ಈಗ ಅವರು ಕಟಿಬದ್ಧರಾಗಿದ್ದುದನ್ನು ನೋಡಿದರೆ ಶಾಸನ ಸಭೆಯಲ್ಲಿ ರಮೇಡಿಯರ ಮಂತ್ರಿಮಂಡಲಕ್ಕಿರುವ ಬೆಂಬಲ ಗಟ್ಟಿಯಾಗಿಲ್ಲವೆಂಬುದು ವ್ಯಕ್ತವಾಗದಿರದು. ಈ ಮಿತಭೋಜನ ಯೋಜನೆಯನ್ನು ಪ್ರತಿಭಟಿಸಲು ೩ ಲಕ್ಷ ಕಲ್ಲಿದ್ದಿಲು ಕೂಲಿಕಾರರು ಸಂಪು ಹೂಡಿದ್ದಾರೆ. ಕೂಲಿಕಾರ ಅಸಂತುಷ್ಟಿ ತೀವ್ರವಾಗಿ ಹಬ್ಬುತಿದೆ. ಮಂತ್ರಿಮಂಡಲ ಎಷ್ಟು ಹೊತ್ತಿಗೆ ಉರುಳುವದೋ ಹೇಳಲಾಗಲ್ಲ. ಈ ಸಂಧಿಯನ್ನು ಸಾಧಿಸಿ ಬಲಾತ್ಕಾರದಿಂದ ಅಧಿಕಾರವನ್ನು ಕಸಿದುಕೊಂಡು ಫ್ಯಾಸಿಸ್ಟ್ ಸರ್ವಾಧಿಕಾರವನ್ನು ಸ್ಥಾಪಿಸುವ ಒಳಸಂಚೊಂದು ಪೂರ್ಣವಾಗಿ ಸಿದ್ಧವಾಗಿದ್ದು ಅದರಲ್ಲಿ ಅನೇಕ ಸೈನ್ಯಾಧಿಕಾರಿಗಳ ಹಾಗು ಕಾರಖಾನೆದಾರರ ಕೈಯಿದ್ದುದು ಕಂಡುಹಿಡಿಯಲ್ಪಟ್ಟಿದೆ. ಅನೈಕ್ಯದ ಫಲವಾಗಿ ಫ್ರೆಂಚ ಪ್ರಜಾತಂತ್ರವಾದಿಗಳು ಫ್ಯಾಸಿಸಂಗೆ ಪುನಃ ಆಹುತಿಯಾಗಬಹುದೆ?

## ಅಣುಯುದ್ಧ

ಅಣುಯುದ್ಧದಿಂದ ಜಗತ್ತಿನ ವಿನಾಶ ಸಮೀಪಿಸುತಿದೆಯೆಂಬ ಮಾತನ್ನು ವೈಜ್ಞಾನಿಕರು ಹೆಚ್ಚು—ಹೆಚ್ಚು ಮುಕ್ತಕಂಠದಿಂದ ಪ್ರಚಾರಪಡಿಸತೊಡಗಿದ್ದಾರೆ. ಕಳೆದ ವಾರ ಚಿಕಾಗೋ (ಅಮೇರಿಕೆ) ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಹಚಿನ್ಸರು ಒಂದು ಪತ್ರಿಕಾ ಲೇಖದಲ್ಲಿ "ಸರ್ವನಾಶದಿಂದ ಪಾರಾಗಲು ನಮಗೆ ಬಹಳವಾದರೆ ಮೂರು ವರ್ಷ ಕಾಲವಿದೆ" ಯೆಂದು ಬರೆದಿದ್ದಾರೆ. "ಅಮೇರಿಕೆಯ ಹತ್ತಿರ ಜಗತ್ತಿನ ಎಲ್ಲ ನಗರಗಳನ್ನು ಧ್ವಂಸಮಾಡುವಷ್ಟು ಅತ್ಯಾಧುನಿಕ ಅಣುಬಾಂಬುಗಳ ಸಂಗ್ರಹವಿದೆ. ಅವುಗಳ ಮುಂದೆ ಹಿರೋಶಿಮಾ ನಾಗಸಾಕಿಗಳ ಮೇಲೆ ಹಾಕಿದ ಬಾಂಬುಗಳು ಬರಿ ಚಿಲ್ಲರೆ" ಎಂದು ಹೇಳಿ "ಜಾಗತಿಕ ಪಾರ್ಲಿಮೆಂಟು ಮತ್ತು ಜಾಗತಿಕ ಶಸ್ತ್ರಸನ್ಯಾಸ ಇವೇ ಶಾಂತಿಯನ್ನುಳಿಸುವ ಉಪಾಯ" ವೆಂದು ಸೂಚಿಸಿದರವರು.

ಪ್ರಸಿದ್ಧ ಭೌತಶಾಸ್ತ್ರಜ್ಞ ಅಲ್ಬರ್ಟ ಐನಸ್ಟೀನರ ಅಧ್ಯಕ್ಷತೆಯಲ್ಲಿ ಸೇರಿದ ಅಣುಶಕ್ತಿಜ್ಞರ ಸಭೆಯೊಂದು ಇನ್ನೆಂಟು ವರ್ಷಗಳಲ್ಲಿ ಅಣುಬಾಂಬುಗಳ ಪ್ರಚಂಡ ಯುದ್ಧ ಪ್ರಾರಂಭವಾಗಬಹುದೆಂದು ಎಚ್ಚರಿಸಿದೆ. ೧೯೫೫ ರಷ್ಟು ಹೊತ್ತಿಗೆ ರಶಿಯಾವೂ ಅಣುಬಾಂಬುಗಳನ್ನು ಸಂಗ್ರಹಿಸಿಟ್ಟಿರುವದು. ಒಮ್ಮೆ ಎರಡು ಪ್ರಮುಖ ರಾಷ್ಟ್ರಗಳು ಅಣುಬಾಂಬುಗಳನ್ನು ಕೂಡಿ ಹಾಕಿದರೆ ಮತ್ತೆ ಶಾಂತಿ ಅಸಂಭವವಾಗುವದೆಂದೂ ಅವರು ಹೇಳಿದ್ದಾರೆ. ಈಗಾಗಲೆ ಅಣುಬಾಂಬುಗಳಿಂದ ಕೂಡ ನಾಶಮಾಡಲಾರದ ಮತ್ತು ಸರ್ವಥಾ ದುರ್ಗಮವಾದ ಮಧ್ಯ ಸೈಬೇರಿಯಾದ ಕಂದರವೊಂದರಲ್ಲಿ ರಶಿಯನ್ನರು ಅಣುವಿಚ್ಛೇದಕ ಕಾರಖಾನೆಗಳನ್ನು ಕಟ್ಟಿದ್ದಾರೆಂದು ತಿಳಿದುಬಂದಿದೆ.

# ಹೈಸ್ಕೂಲುಗಳಿಗೆ ಹೆಚ್ಚಿನ ಸಹಾಯ ಮಾಡುವ ಬಗೆ

ಮೇ ೧೪ ನೆಯ ತಾರೀಕಿನಲ್ಲಿ ಕರ್ನಾಟಕ ಮಾಧ್ಯಮಿಕ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ವಿ. ಬಿ. ನಾಯಕರು ಮತ್ತು ಪ್ರಧಾನ ಕಾರ್ಯದರ್ಶಿಗಳಾದ ಜಿ. ಎಸ್. ಮೊಖಾಸಿಯವರು ಮುಂಬಯಿ ಸರಕಾರದ ಶಿಕ್ಷಣ ಖಾತೆಯ ಕಾರ್ಯದರ್ಶಿಗಳಾದ ಶ್ರೀ ಡಿ. ಎಸ್. ಜೋಶಿಯವರನ್ನು ಭೆಟ್ಟಿಯಾದಾಗ, ಮಾಧ್ಯಮಿಕ ಶಾಲೆಗಳಿಗೆ ಸರಕಾರದವರು ಹೆಚ್ಚು ಹಣ ಕೊಡಲು ಸಮರ್ಥರಾಗುವಂತೆ ಸಂಘದವರು ದಾರಿ ತೋರಿಸಬೇಕೆಂದು ಹೇಳಿದರು. ಆ ಪ್ರಕಾರ ಸಂಘದ ಕಾರ್ಯದರ್ಶಿಗಳು ಈ ವಿಷಯವನ್ನು ಅಭ್ಯಸಿಸಿ ಸರಕಾರವು ಹೇಗೆ ಹೆಚ್ಚು ಹಣವನ್ನು ಕೊಡಲು ಸಾಧ್ಯವಿದೆಯೆಂಬುದನ್ನು ಕೆಳಗಿನ ಅಂಕೆಸಂಖ್ಯೆಗಳಿಂದ ಸಿದ್ಧಮಾಡಿ ತೋರಿಸಿರುವರು.

"ನನಗೆ ತಿಳಿದ ಪ್ರಕಾರ ಶಿಕ್ಷಣ ಖಾತೆಯಲ್ಲಿ ಮೂರು ವಿಧದಿಂದ ಹಣದ ಅಪವ್ಯಯವಾಗುತ್ತದೆ:

(೧) ಮಾಧ್ಯಮಿಕ ಶಿಕ್ಷಣ ಕ್ರಮದಲ್ಲಿ 'ಮಿಡ್ಲ ಸ್ಕೂಲು'ಗಳಿಗಾಗಿ ಮಾಡುವ ವೆಚ್ಚ.

(೨) ಯುರೋಪಿಯನ್ ಮತ್ತು ಅಂಗ್ಲೋ ಇಂಡಿಯನ್ ಶಾಲೆಗಳಿಗೆ ವಿಶೇಷ ಸೌಕರ್ಯವೊದಗಿಸಲು ಮಾಡುವ ವೆಚ್ಚ.

(೩) ವಯಸ್ಕರ ವಿದ್ಯಾಭ್ಯಾಸ ಯೋಜನೆಗಾಗಿ ಮಾಡುವ ವೆಚ್ಚ.

(೧) "ಮಿಡ್ಲ ಸ್ಕೂಲು ಅಭ್ಯಾಸ" (ಹೈಸ್ಕೂಲಿನ ಮೊದಲ ಮೂರು ಇಯತ್ತೆಗಳಲ್ಲಿ ಕಲಿಸುವ ಪಾಠ) ಎಂದರೆ ಇಂಗ್ಲೀಷೊಂದಿಲ್ಲದ, ಈಗ ಉಚಿತವಾಗಿ ಸಾಗುವ "ಅಪ್ಪರ ಪ್ರೈಮರಿ" ಅಭ್ಯಾಸದ ಪ್ರತಿಬಿಂಬ. ಹೈಸ್ಕೂಲಿನ ಕೆಳ ತರಗತಿಗಳಲ್ಲಿ ಇಂಗ್ಲೀಷನ್ನು ಕಲಿಸುವುದನ್ನು ನಿಲ್ಲಿಸಬೇಕೆಂಬ ಸರಕಾರದ ನಿರ್ಣಯದ ಪ್ರಕಾರ "ಮಿಡ್ಲ ಸ್ಕೂಲು"ಗಳು ಅಸ್ತಿತ್ವದ ಹಕ್ಕನ್ನೇ ಕಳೆದುಕೊಳ್ಳುವುವು.

ಆದುದರಿಂದ "ಮಿಡ್ಲ ಸ್ಕೂಲು"ಗಳನ್ನು ತೆಗೆದು ಹಾಕಿದರೆ ಸುಮಾರು ೬ ಲಕ್ಷ ರೂಪಾಯಿಗಳ ಉಳಿತಾಯವಾಗುತ್ತದೆ. ಈ ಹಣದಲ್ಲಿ "ಅಪ್ಪರ್‌ಪ್ರೈಮರಿ" ಅಭ್ಯಾಸದ ಬಗ್ಗೆ ಆಗುವ ಸುಮಾರು ೩ ಲಕ್ಷದಷ್ಟು ಖರ್ಚನ್ನು ಕಳೆದರೆ ೩ ಲಕ್ಷ ಉಳಿಯುವುದು. ಮಿಡ್ಲಸ್ಕೂಲು ಗಳನ್ನು ತೆಗೆದು ಹಾಕಿದ ನಂತರ ನಾಲ್ಕೇ ವರ್ಷಗಳ ಅಭ್ಯಾಸಕ್ಕೆ ಡೆಗೊಡುವಂತಾಗುವ ಹೈಸ್ಕೂಲುಗಳಿಗೆ ಆ ಹಣವನ್ನು "ಗ್ರಾಂಟು" ಕೊಡಬಹುದು. ಕೆಳಗಿನ ಅಂಕೆಗಳು ಈ ಮಾತನ್ನು ಸ್ಪಷ್ಟಪಡಿಸುವುವು.

ಮಿಡ್ಲ ಸ್ಕೂಲುಗಳ ಸಂಖ್ಯೆ

ಹುಡುಗರಿಗಾಗಿ, ಹುಡುಗಿಯರಿಗಾಗಿ, ಒಟ್ಟು
ರೂ. ೪೬೦, ೭೦= ೫೩೦.

ವಿದ್ಯಾರ್ಥಿಗಳು

ಹುಡುಗರು, ಹುಡುಗಿಯರು= ಒಟ್ಟು
೨೫೭೨೧, ೫೨೨೮= ೩೦೯೪೯.

ಖರ್ಚು

ಹುಡುಗರಿಗಾಗಿ, ಹುಡುಗಿಯರಿಗಾಗಿ= ಒಟ್ಟು
ರೂ ೧೫೩೬೫೮, ೨೬೭೩೫= ೧೮೦೩೯೩.

ಹೈಸ್ಕೂಲುಗಳಲ್ಲಿ (ಮೊದಲ ೩ ಇಯತ್ತೆಗಳಲ್ಲಿ)

ಹುಡುಗರಿಗೆ-೬೮೨೩೩, ಹುಡುಗಿಯರಿಗೆ-೧೪೧೩೬, ಒಟ್ಟು ರೂ. ೮೨೩೬೯, ಸರಕಾರಕ್ಕೆ ತಲಾ ಖರ್ಚು— ಹುಡುಗರಿಗೆ ರೂ ೫, ಹುಡುಗಿಯರಿಗೆ ರೂ. ೪ ಬೀಳುತ್ತವೆ.

ತಲಾ ರೂ ೫ ರಂತೆ ಲೆಕ್ಕ ಹಾಕಿದರೆ ಹೈಸ್ಕೂಲುಗಳಲ್ಲಿ ಮೊದಲ ೩ ಇಯತ್ತೆಗಳಿಗೆ ೩,೯೭,೭೩೯ ರೂಪಾಯಿಗಳ ವೆಚ್ಚವಿದೆ. ಹೀಗೆ ಮಿಡ್ಲ ಸ್ಕೂಲು ವಿದ್ಯಾಭ್ಯಾಸಕ್ಕೆ ಒಟ್ಟು ೧,೮೦,೩೯೩, ಮತ್ತು ೩,೯೭,೭೩೯= ೫,೭೮,೧೩೨ ರೂಗಳು ಖರ್ಚಾಗುತ್ತದೆ. ಇವನ್ನು ೩೩೧ ಹೈಸ್ಕೂಲುಗಳಿಗೆ ಹಂಚಿದರೆ ಪ್ರತಿಯೊಂದಕ್ಕೂ ಸುಮಾರು ೧, ೭೫೦ ರೂಪಾಯಿಗಳು ಸಿಗುತ್ತವೆ.

(೨) ಯುರೋಪಿಯನ್ ಮತ್ತು ಅಂಗ್ಲೋ ಇಂಡಿಯನ್ ಶಾಲೆಗಳಿಗೂ ಉಳಿದ ಹೈಸ್ಕೂಲುಗಳಿಗೂ ಭೇದವೆಣಿಸುವುದು ಅನ್ಯಾಯವೂ ಅವಮಾನಕರವೂ ಆಗಿದೆ. ಈ ಭೇದ ಭಾವವನ್ನು ಬಿಟ್ಟರೆ, ಎಲ್ಲ ಶಾಲೆಗಳೂ ಸರಿಸಮವೆಂದು ತಿಳಿದರೆ ಪ್ರತಿಯೊಂದು ಶಾಲೆಗೂ ೧,೮೫೫ ರೂಪಾಯಿಗಳು ಪ್ರತಿವರುಷವೂ ಸಿಗುವಂತಾಗುವುದು. ಕೆಳಗಿನ ಅಂಕೆಗಳು ಈಗ ಹೇಳಿದುದನ್ನು ವಿಶದಪಡಿಸುತ್ತವೆ.

... ಖರ್ಚಾದ ಹಣಕ್ಕೆ ಸರಿಯಾದ ಪ್ರಯೋಜನ ಸಿಗಲಿಲ್ಲ. ಆದುದರಿಂದ ಅಷ್ಟು ಹಣ ಅಪವ್ಯಯಮಾಡಲ್ಪಟ್ಟಂತಾಯಿತು. ಉದ್ದೇಶವೇನೋ ಬಹಳ ಉದಾತ್ತವಾದುದು. ಆದರೆ ಅದು ಬಾಡಿಗೆದಾರಿಯ ಕೆಲಸವಾದಾಗ ಆ ಉದಾತ್ತೋದ್ದೇಶ ಮಾಯವಾಗಿ ವಂಚನೆ ತಲೆಹಾಕುತ್ತದೆ. ನಿರಕ್ಷರತೆಯ ನಾಶವನ್ನು ಸಾಮಾಜಿಕ ಪ್ರಶ್ನೆಯೆಂದು ಗಣಿಸಿ ವೈಯಕ್ತಿಕ ಶಾಲೆಗಳಿಗಾಗಲಿ ತಲಾ ಇಂತಿಷ್ಟೆಂಬ ಮಾನದಿಂದಾಗಲಿ ಸರಕಾರವು ಸಹಾಯ ಮಾಡದೆ ಗುಂಪಾಗಿ ಸಂಘಟಿತವಾದ ಸಂಸ್ಥೆಗಳಿಗೆ ಅದು ಸಹಾಯ ನೀಡಬೇಕು.

ಈ ಹೆಚ್ಚಿಗೆ ಕೊಟ್ಟ ೩ ಲಕ್ಷ ರೂಪಾಯಿಗಳನ್ನು ಹೈಸ್ಕೂಲುಗಳಿಗೆ 'ಗ್ರಾಂಟು' ಕೊಟ್ಟರೆ ಪ್ರತಿಯೊಂದು ಶಾಲೆಗೂ ೯೦೦ ರೂಪಾಯಿಗಳು ಹೆಚ್ಚು ಸಿಗುತ್ತವೆ.

ಈ ಎಲ್ಲವನ್ನೂ ಸೇರಿಸಿದರೆ:—

೧) ಮಿಡ್ಲ ಸ್ಕೂಲ ತೆಗೆದು ಹಾಕುವದರಿಂದ ರೂ. ೧,೭೫೦
೨) ಶಾಲೆಶಾಲೆಗಳಲ್ಲಿ ಭೇದದೆಣಿಕೆಯನ್ನು ಬಿಟ್ಟರೆ ರೂ ೨,೧೩೫
೩) ವಯಸ್ಕರ ವಿದ್ಯಾಭ್ಯಾಸದಲ್ಲಿ ಮಿತವ್ಯಯ ಮಾಡುವುದರಿಂದ ರೂ. ೯೦೦
ಒಟ್ಟು ರೂ. ೪,೭೮೫

## ಹೈಸ್ಕೂಲುಗಳು

| ಶಾಲೆಗಳು | ಸಂಖ್ಯೆ | ವಿದ್ಯಾರ್ಥಿಗಳು | ಸರಕಾರಕ್ಕೆ ಬೀಳುವ ಖರ್ಚು | ಶಾಲೆಯೊಂದಕ್ಕೆ | ವಿದ್ಯಾರ್ಥಿಯೊಬ್ಬನಿಗೆ |
|---|---|---|---|---|---|
| ೧. ಯುರೋಪಿಯನ್ ಮತ್ತು ಅಂಗ್ಲೋ ಇಂಡಿಯನ್ ಶಾಲೆಗಳು | ೬ | ೨,೪೫೯ | ರೂ. ೧,೪೦,೮೯೬ | ರೂ. ೨೦೧೨೮ | ರೂ. ೫೮ |
| ೨. ಇಂಗ್ಲೀಷು ಕಲಿಸುವ ಶಾಲೆಗಳು | ೧೫ | ೫,೪೬೭ | ರೂ. ೭೨,೪೨೪ | ರೂ. ೪೮೨೮ | ರೂ. ೧೩ |
| ೩. ಇತರ ಶಾಲೆಗಳು | ೩೦೯ | ೧೨೫೨೭೫ | ರೂ. ೭,೪೧,೨೮೦ | ರೂ. ೨೩೯೯ | ರೂ. ೧೦ |

## 'ಮಿಡ್ಲ ಸ್ಕೂಲು'ಗಳು

| ಶಾಲೆಗಳು | ಸಂಖ್ಯೆ | ವಿದ್ಯಾರ್ಥಿಗಳು | ಸರಕಾರಕ್ಕೆ ಬೀಳುವ ಖರ್ಚು | ಶಾಲೆಯೊಂದಕ್ಕೆ | ವಿದ್ಯಾರ್ಥಿಯೊಬ್ಬನಿಗೆ |
|---|---|---|---|---|---|
| ೧. ಯುರೋಪಿಯನ್ ಮತ್ತು ಅಂಗ್ಲೋ ಇಂಡಿಯನ್ ಶಾಲೆಗಳು | ೯ | ೭೫೧ | ರೂ. ೧೪೮೮೭ | ರೂ. ೧೫೭೬ | ರೂ. ೨೦ |
| ೨. ಇಂಗ್ಲೀಷ ಕಲಿಸುವ ಶಾಲೆಗಳು | ೫ | ೨೩೯ | ರೂ. ೪,೦೦೫ | ರೂ. ೮೦೧ | ರೂ. ೧೬ |
| ೩. ಇತರ ಶಾಲೆಗಳು | ೧೪೫ | ೧೫೭೭೪ | ರೂ. ೭೩,೯೯೩ | ರೂ. ೫೧೦ | ರೂ. ೫ |

## ಎಲ್ಲ ಶಾಲೆಗಳೂ ಸರಿಸಮವಾದರೆ

| ಶಾಲೆಗಳು | ಸಂಖ್ಯೆ | ವಿದ್ಯಾರ್ಥಿಗಳು | ಸರಕಾರಕ್ಕೆ ಬೀಳುವ ಖರ್ಚು | ಶಾಲೆಯೊಂದಕ್ಕೆ |
|---|---|---|---|---|
| ೧. ಹೈಸ್ಕೂಲುಗಳು | ೩೩೦ | ೧೩೩೨೦೧ | ರೂ. ೯,೫೪,೬೦೧ | ರೂ. ೫೨೫೪ |
| ೨. ಮಿಡ್ಲ ಸ್ಕೂಲುಗಳು | ೧೫೯ | ೧೬೭೬೪ | ರೂ. ೯೨೮೯೫ | ರೂ. ೨೮೮೯ |

ಪ್ರತಿಯೊಂದು ಶಾಲೆಯು ಮೊದಲಿಗಿಂತ ಪ್ರತಿವರ್ಷವೂ ೨,೧೩೫ ರೂಪಾಯಿಗಳನ್ನು ಹೆಚ್ಚು ಪಡೆಯುವಂತಾಗುತ್ತದೆ. (ಮಿಡ್ಲ ಸ್ಕೂಲುಗಳನ್ನು ತೆಗೆದು ಹಾಕಿದರೆ)

(೩) ೩ ನೆಯದು ವಯಸ್ಕರ ವಿದ್ಯಾಭ್ಯಾಸ ಕಳೆದವರ್ಷ ೧,೧೫,೦೦೦ ರೂಪಾಯಿಗಳನ್ನು ಆ ಬಗ್ಗೆ ಕೊಡಲಾಗಿತ್ತು. ಈ ವರ್ಷ ಮತ್ತೆ ೩ ಲಕ್ಷಗಳಷ್ಟು ಹೆಚ್ಚು ಮಾಡಲಾಯಿತು.

ಈ ಅಂಕೆಗಳಿಂದ ಪ್ರತಿ ಹೈಸ್ಕೂಲೂ ಪ್ರತಿ ವರ್ಷ ಸಿಗುವುದಕ್ಕಿಂತ ೪,೭೮೫ ರೂಪಾಯಿಗಳನ್ನು ಸರಕಾರಕ್ಕೆ ಹೆಚ್ಚಿನ ಹೊರೆ ಹೊಂಸದೆ ಹೆಚ್ಚು ಪಡೆಯಬಹುದೆಂದು ತೋರಿಸಲಾಗಿದೆ.



# ನೀಲಗಿರಿ ಜಿಲ್ಲೆಯನ್ನು ಕರ್ನಾಟಕ ಪ್ರಾಂತಕ್ಕೆ ಸೇರಿಸಿರಿ

## ಕೂಡಲೆ ಕನ್ನಡ ಶಾಲೆ ತೆಗೆಯಿರಿ

ನೀಲಗಿರಿ ತಾಲೂಕು ಮತ್ತು ಗ್ರಾಮ ಕಾಂಗ್ರೆಸ ಸಮಿತಿ ಸಭೆ ಶ್ರೀ ಕೆ ಬೊಕ್ಕಯ್ಯಗೌಡರು ಬಿ. ಎ. ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ೧೬—೬—೪೭ ನೇ ದಿನ ಕೂಡಿ ನೀಲಗಿರಿ ಜಿಲ್ಲೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ವಿಚಾರ ಮಾಡಿ ಮಹತ್ವದ ನಿರ್ಣಯಗಳನ್ನು ಸ್ವೀಕರಿಸಲಾಯಿತು. ಆ ನಿರ್ಣಯಗಳ ಸಾರ ಇಂತಿದೆ—

ತೋಡರು, ಕೋಟರು, ಇರುಳರು ಕುರುಂಬರು ಮೊದಲಾದ ಮೂಲ ನಿವಾಸಿಗಳು ಕನ್ನಡ ಮಾತಾಡುವ ಜನರಾಗಿದ್ದು ೧೦—೧೧ ನೇ ಶತಮಾನಗಳಿಂದ ಇಲ್ಲಿ ವಾಸಿಸುತ್ತಿರುವರು. ಹೀಗಿದ್ದರೂ ಅವರಿಗೆ ಮಾತೃಭಾಷೆಯನ್ನು ಕಲಿಯಲು ತಮ್ಮ ಸಂಸ್ಕೃತಿ, ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಂಡು ಸ್ಥಾನಮಾನಗಳನ್ನು ಕಾಯ್ದುಕೊಳ್ಳಲು ಯಾವದೇ ಬಗೆಯ ಅನುಕೂಲತೆಗಳನ್ನು ಮಾಡಿಕೊಡದೆ ಪರಕೀಯ ಭಾಷೆಯನ್ನು ಕಲಿಯಲು ಒತ್ತಾಯ ಪಡಿಸಿ ಮಹದನ್ಯಾಯ ಮಾಡಲಾಗಿದೆ. ಇದರಿಂದ ತಮ್ಮ ಉದ್ಧಾರವಾಗುವದಿಲ್ಲೆಂದೂ ಸಂಸ್ಕೃತಿ ಸಂವರ್ಧನೆಯಾಗದೆಂದೂ ಇಲ್ಲಿನ ಜನರಿಗೆ ಮನವರಿಕೆಯಾದ್ದರಿಂದ ಮದ್ರಾಸ ಸರಕಾರದವರು ಕೂಡಲೆ ಇಲ್ಲಿನ ಪ್ರಾಥಮಿಕ ಶಾಲೆಗಳಲ್ಲೆಲ್ಲ ಕನ್ನಡವನ್ನು ಕಲಿಸುವ ಹಾಗು ಕನ್ನಡವನ್ನೆ ಬೋಧಭಾಷೆಯನ್ನಾಗಿ ಏರ್ಪಡಿಸುವ ಏರ್ಪಾಟು ಮಾಡಬೇಕು. ಕನ್ನಡವೇ ಜಿಲ್ಲೆಯ ಭಾಷೆಯೆಂದು ಪರಿಗಣಿಸಬೇಕೆಂದೂ ಕೇಳಿಕೊಳ್ಳಲಾಗಿದೆ.

೨) ಗಂಗರ ಕಾಲದಿಂದಲೂ ನೀಲಗಿರಿ ಜಿಲ್ಲೆ ಮೈಸೂರು ಸಂಸ್ಥಾನಕ್ಕೆ ಸೇರಿದ್ದಿತು. ಆದರೆ ಪರಕೀಯರ ಆಡಳಿತ ಇಲ್ಲಿ ಪ್ರಾರಂಭವಾದ ಕೂಡಲೆ ಈ ಜಿಲ್ಲೆಯನ್ನು ತಮಗನುಕೂಲವಾಗುವದಕ್ಕೆಂದು ತಮಿಳನಾಡಿಗೆ ಕೂಡಿಸಿದರು. ಇದರಿಂದ ಈ ಜಿಲ್ಲೆಯ ಹಿನ್ನಡೆಗೆ ಕಾರಣವಾಯಿತು. ಹಿಂದೀ ರಾಷ್ಟ್ರೀಯ ಮಹಾಸಭೆಯವರೂ ಹೆಚ್ಚು ವಿಚಾರ ಮಾಡದೆ ಈ ಭಾಗವನ್ನು ತಮಿಳನಾಡ ಕಾಂಗ್ರೆಸ ಸಮಿತಿಗೆ ಜೋಡಿಸಿದರು. ಈಗಲಾದರೂ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರು ಮತ್ತು ಎ. ಐ. ಸಿ. ಸಿ. ಯವರು ಈ ತಪ್ಪನ್ನು ತಿದ್ದಿಕೊಂಡು ನೀಲಗಿರಿ ಜಿಲ್ಲೆಯನ್ನು ಕರ್ನಾಟಕ ಪ್ರಾಂತಕ್ಕೆ ಜೋಡಿಸಬೇಕು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಸಮಿತಿಯವರಾದರೂ ಈ ದಿಸೆಯಲ್ಲಿ ಕೂಡಲೆ ಕಾರ್ಯಪ್ರವೃತ್ತರಾಗಿ ಅವಶ್ಯಕ ಬದಲಾವಣೆ ಮಾಡಿಸಿ ಜನತೆಯ ನೈಸರ್ಗಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಬೇಕೆಂದು ಕೇಳಿಕೊಳ್ಳಲಾಗುತ್ತದೆ.

೩) ಘಟನಾ ಸಮಿತಿಯು ಭಾಷಾನ್ವಯ ಪ್ರಾಂತರಚನೆಯ ಉಪಸಮಿತಿಯವರು ಮತ್ತು ಇನ್ನು ಮುಂದೆ ಸ್ಥಾಪಿತವಾಗಲಿರುವ ಗಡಿ ನಿರ್ಣಯ ಸಮಿತಿಯವರು ಈ ಭಾಗದ ಜನತೆಯ ಇತಿಹಾಸ, ಪರಂಪರೆ, ಸಂಸ್ಕೃತಿ, ಭಾಷೆ ಮೊದಲಾದ್ದನ್ನೆಲ್ಲ ವಿಚಾರ ಮಾಡಿ ಕರ್ನಾಟಕ ಪ್ರಾಂತದಲ್ಲಿಯೆ ಅದನ್ನು ಸೇರಿಸಬೇಕು. ಕರ್ನಾಟಕದ ಹೊರತು ಬೇರೆ ಪ್ರಾಂತದಲ್ಲಿ ಅದನ್ನು ಸೇರಿಸಿದರೆ ಈ ಜನಾಂಗದ ಇತಿಶ್ರೀಯೇ ಆದೀತಾಗುವದು. ಬ್ರಿಟಿಶರು ಬಂದ ನಂತರ ವ್ಯಾಪಾರಕ್ಕಾಗಿ ಇಲ್ಲಿ ನೆಲಸಿದವರ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ಕೇಳಬಾರದೆಂದೂ ಈ ಸಂದರ್ಭದಲ್ಲಿ ಹೇಳಬಯಸುತ್ತೇವೆ.

ಕರ್ಮವೀರ
ಹರಿಜನ ಪುರವಣಿ

# ಸಂದೇಹ

"ಪುರುಷ-ಸ್ತ್ರೀಯರ ಸಂಬಂಧದಲ್ಲಿ ವಿಚಿತ್ರ ಮನೋವೃತ್ತಿಯನ್ನು ನಾನು ತಳೆದಿದ್ದೇನೆ. ಇವುಗಳಿಗೆ ಕೆಲವೊಂದು ನಿರ್ಬಂಧಗಳಿರಬೇಕೆಂದು ನನ್ನ ನಂಬುಗೆ. ಆದರೂ ನನ್ನ ಪರಿಸ್ಥಿತಿ ತ್ರಿಶಂಕುವಿನಂತಾಗಿದೆ ಸದ್ಯಕ್ಕಿಂತ ಹೆಚ್ಚು ಸ್ವಾಭಾವಿಕವಾದ ಸಂಬಂಧ ಸ್ತ್ರೀ-ಪುರುಷರಲ್ಲಿದ್ದುದಾದರೆ ಪಾಪಾಚರಣೆ ಈಗಿನಕಿಂತ ಕದಾಚಿತ್ ಕಡಮೆಯಾಗಬಹುದಿತ್ತು. ಆದರೂ ಸ್ಪರ್ಶವು ಎಷ್ಟೇ ಬಾ[illegible]ಪದ್ಧಾಗಿದ್ದರೂ ಮಾನವನಲ್ಲಿ ಕಾಮವಾಸ[illegible]ನ್ನು ಹುಟ್ಟಿಸುವುದೆಂದು ನನ್ನ ಹೃದಯದ ಯಾವುದೋ ಒಂದು ನಾಡಿ ಮಿಡಿಯುತ್ತದೆ. ಬಂಧು-ಭಗಿನಿಯರ ಮತ್ತು ತಂದೆ ಮಗಳ ವಿಷಯದಲ್ಲಿ ಕೋರ್ಟುಗಳಲ್ಲಿ ನಡೆದ ಖಟ್ಲೆಗಳನ್ನು ವಿಮರ್ಶಿಸಿದ್ದಾದರೆ ಪ್ರಾರಂಭವು ಬಹಳ ಅನಪಾಯಕಾರಿಯಾಗಿದೆಂದು ಕಂಡುಬರದಿರಲಾರದು. ಪುರುಷನಲ್ಲಿ ಅಷ್ಟೊಂದು ವಿಶುದ್ಧ ವಿರಕ್ತಿಯಿಲ್ಲದಿದ್ದರೆ ಕೇವಲ ಸ್ಪರ್ಶಮಾತ್ರದಿಂದಲೆ ಒಂದು ತಿಂಗಳೊಳಗಾಗಿ ಅಷ್ಟೇ ಏಕೆ ಒಂದು ವಾರದಲ್ಲಿ ಕೂಡ ಅವನು ಅಧೋಗತಿಗಿಳಿಯುವನೆಂದು ನನ್ನ [illegible]ಭಿಪ್ರಾಯ. ವಿಶುದ್ಧ ಮನುಷ್ಯನಿಗೆ ಹತ್ತು [illegible]ರ್ಷಗಳಾದರೂ ಹತ್ತಬಹುದು ಆದರೆ ಅವನೂ ದುಸ್ಥಿತಿಗಿಳಿಯುವನೆಂಬುದು ನಿಶ್ಚಿತ. ಪರಂಪರೆಯಾಗಿ ನಮ್ಮಲ್ಲಿ ಮನೆಮಾಡಿಕೊಂಡ ಶೀಲ ಮತ್ತು ಆಧುನಿಕ ಪುಸ್ತಕಗಳ ಅಭ್ಯಾಸ ಇವುಗಳಲ್ಲಿ ಯಾವಾಗಲೂ ತಿಕ್ಕಾಟವಿದ್ದೇ ಇರುವದು. ಸ್ತ್ರೀ ಪುರುಷ ಸಂಬಂಧವನ್ನು ಸಮಾಜವು ಸಂಪೂರ್ಣವಾಗಿ ಬಿಟ್ಟುಬಿಡಬಲ್ಲದೊ ಎಂಬ ಪ್ರಶ್ನೆ ಅನೇಕಸಲ ಉದ್ಭವಿಸುತ್ತದೆ. ಈ ಬಗ್ಗೆ ನಾನಿನ್ನೂ ನಿರ್ಣಯಕ್ಕೆ ಬಂದಿಲ್ಲ. ನನ್ನ ದುರವಸ್ಥೆಯು ಹಾಡು ಸ್ವಲ್ಪದರಲ್ಲಿ ಇಂತಿದೆ."

ಅನೇಕ ತರುಣ ಮತ್ತು ತರುಣಿಯರ ಪರಿಸ್ಥಿತಿ ಸಾಧಾರಣವಾಗಿ ಇದೇ ಬಗೆಯದಾಗಿರುವದು. ಇಂಥ ತರುಣರಿಗೆ ಒಂದೇ ಒಂದು ದಾರಿಯಿರುವದು. ಅವರು ಸ್ತ್ರೀಯರೊಡನೆ ಎಲ್ಲ ಬಗೆಯ ಸಹವಾಸವನ್ನು ಬಿಟ್ಟುಗೊಡತಕ್ಕದ್ದು. ಹಿಂದಿನ ಕಾಲದಲ್ಲಿ ಅನುಭವ ಪಡೆದ ನಮ್ಮ ಧಾರ್ಮಿಕ ಪುಸ್ತಕಗಳಲ್ಲಿ ನಿಯಮ ನಿರ್ಬಂಧಗಳನ್ನು ಹಾಕಿದ್ದುಂಟು. ಆ ಗ್ರಂಥಕಾರರಿಗೆ ಮತ್ತು ಅವರ ವಾಚಕರಿಗೆ ಅವೆಲ್ಲ ಅವಶ್ಯವಾಗಿದ್ದವೆಂಬಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬ ಅಭಿಲಾಷಿಯು ಅವುಗಳಲ್ಲಿ ಅವಶ್ಯಕವಾದುದನ್ನು ಆಯ್ದುಕೊಂಡು ತನ್ನ ಅನುಭವದಿಂದ ಅವಶ್ಯವೆನಿಸಿದ ಹೆಚ್ಚಿನವುಗಳನ್ನು ಸೇರಿಸಿಕೊಳ್ಳಬೇಕು. ಸಾಧಿಸಬೇಕಾದ ಧ್ಯೇಯದ ಸುತ್ತ ಪರ್ತುಲವೊಂದನ್ನು ತಗೆದರೆ ಆ ಧ್ಯೇಯವನ್ನು ಮುಟ್ಟುವದಕ್ಕೆ ಆಯಾ ಜನರ ಅನುಕೂಲತೆಗಳಿಗನುಗುಣವಾಗಿ ಅನೇಕ ಮಾರ್ಗಗಳಿವೆಂಬದು ಗೊತ್ತಾಗುವದು.

ತನ್ನ ಸ್ವಂತ-ಮನದ ಹಂಬಲವನ್ನು ಅರಿಯದ ಯಾವನೊಬ್ಬ ಅಭಿಲಾಷಿಯು ಅಂಥನಂತೆ ಎರಡನೆಯವರ ಅನುಕರಣ ಮಾಡಿದರೆ ನಿಶ್ಚಯವಾಗಿ ಅಯಶಸ್ವಿಯಾಗುವನು.

ಒಂದುಬಗೆಯ ಎಚ್ಚರಿಕೆಯೆಂದು ಇಷ್ಟೆಲ್ಲ ಹೇಳಿದಬಳಿಕ, ಕೋರ್ಟಿನಲ್ಲಿಯ ಖಟ್ಲೆಗಳನ್ನು ಮತ್ತು ಕಾಮೋದ್ದೀಪಕ ಸಾಹಿತ್ಯವನ್ನೋದಿದ ನಂತರ ಬ್ರಹ್ಮಚರ್ಯದ ನಿಜವಾದ ಮಾರ್ಗವನ್ನು ಹುಡುಕಹೋಗುವದೆಂದರೆ ಗಗನ ಕುಸುಮವನ್ನ ರಚುತ್ತಹೋದಂತೆ ನಿರರ್ಥಕವೇ ಸೈ. ಎಂದು ನಾನು ಅದಕ್ಕೆ ಜೋಡಿಸಬಲ್ಲೆ. ಬ್ರಹ್ಮಚರ್ಯದ ನಿಜವಾದ ಮಾರ್ಗವು ಇಂಗ್ಲಿಶ್ ನ್ಯಾಯಾಲಯಗಳಲ್ಲಿ ಇಲ್ಲವೆ ಕಾದಂಬರಿಗಳಲ್ಲಿ ದೊರೆಯಲಾರದು. ಪರಿಮಿತ ಕ್ಷೇತ್ರಗಳಲ್ಲಿ ಅವುಗಳ ಉಪಯೋಗವಿದ್ದೇ ಇದೆ. ಆದರೆ ಬ್ರಹ್ಮಚರ್ಯವನ್ನು ಸಾಧಿಸಬೇಕೆನ್ನುವವರಿಗೆ ಅವುಗಳ ಉಪಯೋಗ ಸ್ವಲ್ಪೂ ಇಲ್ಲ. ಈ ಕಠಿಣ ಮಾರ್ಗವನ್ನು ಕ್ರಮಿಸುವ ಇಂಗ್ಲಿಶ್ ಸ್ತ್ರೀ ಪುರುಷರು ಮೇಲೆ ಉಲ್ಲೇಖಿಸಿದ ಸುದ್ದಿಗಾರನ ಕಲ್ಪನೆಗಳಿಂದ ದುಃಖಿತರಾಗುವದಿಲ್ಲ. ಯಾರ ಬಗ್ಗೆ ನಾನು ವಿಚಾರ ಮಾಡುವೆನೊ ಅವರು ತಮ್ಮ ಹೃದಯಗಳಲ್ಲಿ ತಮ್ಮ ಪರಮಾತ್ಮನನ್ನು ಪ್ರತಿಷ್ಠಿಸಿಕೊಂಡಿರುವರು. ಅವರೇನು ಆತ್ಮವಂಚಕರಲ್ಲ, ಎರಡನೆಯವರನ್ನೂ ವಂಚಿಸಲಾರರು. ಅಂಥವರಿಗೆ ತಮ್ಮ ಅಕ್ಕತಂಗಿಯರು ಮತ್ತು ತಾಯಂದಿರು ಯಾವಾಗಲೂ ಅಕ್ಕತಂಗಿ ಮತ್ತು ತಾಯಂದಿರೇ ಆಗಿರುವರು; ಇಷ್ಟೇ ಅಲ್ಲ ಎಲ್ಲ ಸ್ತ್ರೀಯರೂ ಅವರಿಗೆ ಭಗಿನಿ ಮತ್ತು ಮಾತೃಸಮಾನರಾಗಿರುವರು. ಸ್ತ್ರೀಯರ ಸ್ಪರ್ಶಮಾತ್ರದಿಂದ ಪಾಪವುಂಟಾಗುತ್ತದೆ ಇಲ್ಲವೆ ಅದರಿಂದ ಅಪಾಯವಾಗುತ್ತದೆಂದು ಅವರಿಗೆಂದೂ ಎನಿಸುವದಿಲ್ಲ. ತಮ್ಮಲ್ಲಿ ಕಾಣುವ ಪರಮಾತ್ಮನನ್ನೇ ಪ್ರತಿಯೊಬ್ಬ ಹೆಣ್ಣುಮಗಳಲ್ಲಿಯೂ ಅವರು ಕಾಣುವರು. ಇಂಥವರ ಸಂಬಂಧ ನಮಗೆ ಬಂದಿಲ್ಲೆಂದಾಕ್ಷಣ ಅವರ ಅಸ್ತಿತ್ವವೇ ಇಲ್ಲೆಂದು ಹೇಳುವದು ಔದ್ಧತ್ಯವೆನಿಸದಿರಲಾರದು. ಇದೆಲ್ಲ ಸಂಭವನೀಯವಾಗಿದೆಂಬಲ್ಲಿ ಅಪನಂಬಿಕೆಯನ್ನು ತಾಳುವದಾದರೂ ಬ್ರಹ್ಮಚರ್ಯದ ಮಟ್ಟನ್ನು ಕೆಳಗಿಳಿಸಿದಂತೆಯೆ ಸೈ. ಪರಮಾತ್ಮನನ್ನು ನಾವು ಪ್ರತ್ಯಕ್ಷವಾಗಿ ನೋಡಿಲ್ಲ ಅಥವಾ ಆ ಬಗೆಯ ಅನುಭವ ಪಡೆದ ಜನರು ನಮಗೆ ದೊರೆತಿಲ್ಲೆಂದು ಹೇಳಿ ಪರಮಾತ್ಮನ ಅಸ್ತಿತ್ವವೆ ಇಲ್ಲೆಂದು ಹೇಳುವದು ಎಷ್ಟು ತಪ್ಪೋ ಬ್ರಹ್ಮಚರ್ಯದ ಬಗ್ಗೆ ನಮ್ಮ ಅನುಭವ ವಿರುದ್ಧವಾಗಿದೆಂದು ಹೇಳಿ ಅದರ ಸಂಭಾವ್ಯತೆಯನ್ನು ಅಲ್ಲಗಳೆಯುವದೂ ಅಷ್ಟೇ ದೋಷಪೂರ್ಣವಾಗಿದೆ.

(ಗುಜರಾಥಿಯಿಂದ ಅನುವಾದಿತ)

ಹೊಸದಿಲ್ಲಿ — ಮೋ. ಕ. ಗಾಂಧಿ
೨೯—೬—೪೭

## ಯೋಗ್ಯ ಕೂಲಿ

ಪಗಾರದಾರಿ ಸಂಬಳ ಸಮಿತಿಯವರು ಬಹಳ ದಿನಗಳಿಂದ ಅಗದೇಕಾಗಿದ್ದ ಸುಧಾರಣೆಯನ್ನು ಸೂಚಿಸಿರುವರು. ಸಾರ್ವಜನಿಕ ಸೇವಕರಿಗೆ ಕೊಡತಕ್ಕ ಸಂಬಳದ ಪರಮಾವಧಿ ಮಿತಿಯನ್ನು ೩೦೦೦ ರೂಪಾಯಿ ಮತ್ತು ಕನಿಷ್ಠ ಮಿತಿಯನ್ನು ೫೫ ರೂಪಾಯಿಗಳನ್ನಾಗಿಡಬೇಕೆಂದು ಅವರು ಸಾಮಾನ್ಯ ನಿಯಮವನ್ನು ಸೂಚಿಸಿದ್ದಾರೆ.

ಹಿಂದುಸ್ತಾನವೀಗ ಸ್ವಾತಂತ್ರ್ಯದ ಹೊಸ್ತಿಲಲ್ಲಿದೆ. ಸರಕಾರಿ ನೋಕರರ ಸಂಬಳದ ಸಮಸ್ಯೆ ಯಾವಾಗಲೂ ವ್ಯಸನಕಾರಕವಾದ ಮುದ್ದೆಯಾಗಿದೆ. ಪರಕೀಯ ಆಡಳಿತದಲ್ಲಿ ಹಣವನ್ನು ಹೆಚ್ಚಿಸುವಲ್ಲಿ ಅನೇಕ ಬಾಹ್ಯವಿಚಾರಗಳು ಕಾರಣವಾದವು. ಸ್ವದೇಶದಿಂದ ಬಹಳ ದೂರ ಸೇವೆ ಮಾಡುತಿರುವ ಹಾನಿಯನ್ನು ತುಂಬಿಕೊಡುವ ರೀತಿಯಲ್ಲಿ ಸಂಬಳವಿರಬೇಕಾಗಿದ್ದಿತು. ಅವರ ಕುಟುಂಬ ಅತಿತ್ತ ಅಲೆದಾಡಬೇಕಾದ ಸಂದರ್ಭವನ್ನು ಮಕ್ಕಳ ವಿದ್ಯಾಭ್ಯಾಸದಲ್ಲಿ ಬರುವ ವ್ಯಯವನ್ನು ಸಂಬಳ ಗೊತ್ತುಪಡಿಸುವಾಗ ವಿಚಾರಕ್ಕೆ ತೆಗೆದುಕೊಳ್ಳಲಾಗುತಿದ್ದಿತು. ಅಂತೆಯೆ ಹೆಚ್ಚು ಸಂಬಳ ಕೊಡಮಾಡಿದರೂ ಅತ್ಯುತ್ತಮ ಜನ ಸಿಕ್ಕಲು ಕಠಿನಹೋಗುತಿತ್ತು ಅಲ್ಲದೆ ಧಾರಣೆಮಟ್ಟ ಬಹಳ ಹೆಚ್ಚಿಗಿದ್ದ ದೇಶದೊಡನೆ ನಮಗೆ ಸ್ಪರ್ಧಿಸಬೇಕಿತ್ತು ಅಲ್ಲಿ ದೊರೆವ ನೋಕರಿ ಕಡಮೆ ಧಾರಣೆ ಮಟ್ಟವಿದ್ದ ದೇಶವನ್ನು ಸಹಜವಾಗಿ ಸೋಲಿಸುತಿದ್ದಿತು.

ಉಚ್ಚ ಅಧಿಕಾರಸ್ಥಳಗಳಲ್ಲಿ ಸಾರ್ವಜನಿಕ ಭಾವನೆ ಮತ್ತು ತಮ್ಮ ದೇಶದ ಸೇವೆ ಮಾಡಬೇಕೆಂಬ ಬಯಕೆ ಇದ್ದುದಾದರೆ ಸಂಬಳದ ಪ್ರಮಾಣವು ಕಡಮೆಯಿರುವದು ಶಕ್ಯವಿದೆ. ಆದರೆ ಪರಕೀಯರ ಸಂದರ್ಭದಲ್ಲಿ ಇದರ ಅಭಾವವಿದ್ದಿತು ಪರಕೀಯರು ಮತ್ತು ಹಿಂದೀಯರು ಎಂಬ ಭೇದವನ್ನು ಕಲ್ಪಿಸುವದು ಅಸಮಂಜಸ ತೋರಿದ್ದರಿಂದ ನಮ್ಮ ಜನರೂ ಅಷ್ಟೇ ಹೆಚ್ಚು ಸಂಬಳವನ್ನು ಪಡೆಯುತಿದ್ದರು. ಹೀಗೆ ಮಾಡುವಾಗ ಕರ ಕೊಡುವವರ ಉತ್ಪನ್ನವನ್ನು ಸ್ವಲ್ಪಾದರೂ ಲಕ್ಷದಲ್ಲಿ ತೆಗೆದುಕೊಳ್ಳುತಿರಲಿಲ್ಲ.

ಹಿಂದುಸ್ತಾನದ ಸ್ವಾಭಾವಿಕ [ಸಾಂಸ್ಕೃತಿಕ ಹಿನ್ನೆಲೆಗನುಗುಣವಾಗಿ ಇದೆಲ್ಲ ಬದಲಾಗಲಿಕ್ಕೆ ಬೇಕು. ನಮ್ಮ ದೇಸು ಕೇವಲ ಭೌತಿಕ ಆರ್ಥಿಕ ತಳಹದಿಯ ಮೇಲೆ ಕಟ್ಟಲ್ಪಟ್ಟ ರಾಷ್ಟ್ರವಲ್ಲ; ಅಲ್ಲದೆ ನಮ್ಮ ದೇಶದಲ್ಲೇನು ಖಾಸಗಿ ವೆಚ್ಚ ಬಹಳ ಹೆಚ್ಚಿನ ಮಟ್ಟದ್ದಾಗುವಂತೆ ನಮ್ಮ ಬೇಡಿಕೆಗಳು ಇರುವದಿಲ್ಲ. ಕೇವಲ ಸಂಬಳಕ್ಕಾಗಿ ದುಡಿಯುವ ಜನರು ನಮಗೆ ಬೇಕಾಗಿಲ್ಲ. ಅಲ್ಲದೆ ಭಾವೀ ಹಿತ ಸಂಬಂಧಗಳ ಮತ್ತು ಲಂಚಕೊಳ್ಳದೆ ಆದಾಯದ ನಷ್ಟಪರಿಹಾರದ ರೂಪದಲ್ಲಿ ನಾವೇನು ಸಂಬಳ ಕೊಡಬೇಕಾಗಿಲ್ಲ ಸಂಪತ್ತಿಗಾಗಿ ಅಲ್ಲ ಆದರೆ ಧ್ಯೇಯಕ್ಕಾಗಿ ದುಡಿಯುವವರಿಗೆ ಮರ್ಯಾದೆ ಕೊಡುವದು ನಮ್ಮ ಪರಂಪರೆ. ಪರಿಸ್ಥಿತಿಯು ಹೀಗಿರುವದರಿಂದ, ಒಮ್ಮೆ ಪರಕೀಯ ಉದಾಹರಣೆ ಮಾಯವಾಯಿತೆಂದರೆ ಸೇವೆಯಲ್ಲಿಯೆ ತಮ್ಮ ಮಹತ್ವಾಕಾಂಕ್ಷೆಯನ್ನು ಕಾಣುವ ಸ್ತ್ರೀ ಪುರುಷರನ್ನು ದೊರಕಿಸಲೇನು, ಕಠಿಣ ಹೋಗಲಾರದು, ಕೇವಲ ಭೌತಿಕ ಸೌಕರ್ಯಗಳನ್ನು ಕೊಡಮಾಡಿ ಇಂಥ ಜನರನ್ನು ದೊರಕಿಸುವದು ಶಕ್ಯವಾಗಲಾರದು.

ದೇಶಾಭಿಮಾನದ ಸ್ಫುರಣವಾದ ಕೂಡಲೆ ನೋಕರಿಯ ಭಾವನೆಯಲ್ಲಿಯೆ ಬದಲಾವಣೆಯಾಗುವದೆಂಬದಾಗಿ ನಾವು ತಿಳಿಯಲಿಕ್ಕೆ ಬೇಕು. ಸ್ವಾತಂತ್ರ್ಯ ಸೂರ್ಯ ಉದಯ ಹೊಂದಿದ ದಿನ ೩೦೦೦ ರೂಪಾಯಿ ಮತ್ತು ೫೫ ರೂಪಾಯಿಗಳ ನಡುವಿನ ಈ ಅಂತರ ಮಾಯವಾಗುವದು. ಅರ್ತರ ಸೇವೆ ಮಾಡಬೇಕೆಂಬ ಇಚ್ಛೆಯಿಂದ ತುಂಬಿದ ಧ್ಯೇಯನಿಷ್ಠ ಸ್ತ್ರೀಪುರುಷರನ್ನು ನೋಕರಿ ಆಕರ್ಷಿಸಬಲ್ಲದು. ರೊಟ್ಟಿಗೆದ್ದ ನಾಗರಿಕರಿಂದ ಸುಲಿದುಕೊಂಡ ಕರಗಳಿಂದ ಉಪಜೀವಿಸುವದೆಂದರೆ ನರಭಕ್ಷಣೆಯೆಂದು ಭಾವಿಸಲಾಗುವದು. ಆ ಸುದಿನ ಬಹು ದೂರವಿಲ್ಲೆಂದು ನಾವು ಆಶಿಸುತ್ತೇವೆ.

— ಜೆ. ಸಿ. ಕುಮಾರಪ್ಪ

## ಹಕ್ಕು ಇಲ್ಲವೆ ಕರ್ತವ್ಯ

[ಜೂನ ೨೮ ಮತ್ತು ೨೯ ಕ್ಕೆ ಗಾಂಧಿಜಿ ಪ್ರಾರ್ಥನೋತ್ತರ ಸಭೆಯಲ್ಲಿ ಮಾಡಿದ ಭಾಷಣಗಳಿಂದ ಆಯ್ದುದು. — ಸುಶಿಲಾ ನಯ್ಯರ

ಸಮಾಜವನ್ನು ಇಂದು ಬಾಧಿಸುತಿರುವ ಮಹಾ ಅನಿಷ್ಟದ ಸಂಬಂಧದಲ್ಲಿ ಈ ದಿನ ಹೇಳಬಯಸುತ್ತೇನೆ. ಬಂಡವಲುದಾರರು ಮತ್ತು ಜಮೀನದಾರರು ತಮ್ಮ ಹಕ್ಕು ಬಾಧ್ಯತೆಗಳನ್ನು ಪ್ರತಿಪಾದಿಸುತ್ತಿರುವರು. ನರೇಂದ್ರರು ತಮ್ಮ ಆಳುವ ಹಕ್ಕು ದೈವಾಯತ್ತವೆಂದು ಹೇಳುತಿರುವರು. ಅದನ್ನು ವಿರೋಧಿಸುವದೆ ತನ್ನ ಕರ್ತವ್ಯವೆಂದು ರೈತ ಹೇಳುತಿರುವನು. ಎಲ್ಲರೂ ಕೇವಲ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಒತ್ತಾಯಪಡಿಸಿ ಕರ್ತವ್ಯಗಳನ್ನು ತಿಳಿದುಕೊಳ್ಳದಿದ್ದರೆ ಎಲ್ಲೆಲ್ಲಿಯೂ ತೀರ ಗೊಂದಲ ಮತ್ತು ಗಡಿಬಿಡಿ ಏಳುವದಲ್ಲಿ ಸಂದೇಹವಿಲ್ಲ.

ತದ್ವಿರುದ್ಧವಾಗಿ ಪ್ರತಿಯೊಬ್ಬ ತನ್ನ ಹಕ್ಕುಗಳ ಬಗ್ಗೆ ಅಗ್ರಹ ಹಿಡಿಯದೆ ಕರ್ತವ್ಯವನ್ನು ಮಾಡಿದರೆ ಕೂಡಲೆ ಮಾನವ ಸಮಾಜದಲ್ಲಿ ಸುವ್ಯವಸ್ಥಿತ ಆಡಳಿತ ನಡೆಯುವದು. ದೈವಾಯತ್ತವಾದ ಆಳುವ ಹಕ್ಕೆಂಬುದೇನೂ ಇರುವದಿಲ್ಲ. ತಮ್ಮ ಒಡೆಯರ ಅಪ್ಪಣೆಗಳನ್ನು ಜಾ ಜೂ ಎನ್ನದೆ ಪಾಲಿಸುವದೆ ರೈತರ ಕರ್ತವ್ಯವೆಂದು ಹೇಳುವದು ಸರಿಯಲ್ಲ. ಪರಂಪರಾಗತವಾಗಿ ಬಂದ ಈ ವೈಷಮ್ಯವು ಸಮಾಜದ ಸುಖ ಶಾಂತಿಗಳಿಗೆ ಘಾತಕವಾಗಿರುವದರಿಂದ ಅದು ಇಲ್ಲದಂತಾಗಲಿಕ್ಕೆ ಬೇಕು. ಈ ವರೆಗೆ ತುಳಿಯಲ್ಪಟ್ಟ ಕೋಟ್ಯವಧಿ ಜನರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಅನಿರ್ಬಂಧವಾಗಿ ಅಗ್ರಹ ತಾಳುವದೂ ಸಮಾಜದ ಸುಸ್ಥಿತಿಗೆ ಹೆಚ್ಚಲ್ಲದಿದರೂ ಅಷ್ಟೇ ಅಪಾಯಕಾರಕವಾಗಿದೆ. ದೈವಾಯತ್ತ ಮೊದಲಾದ ಹಕ್ಕು ಬಾಧ್ಯತೆಗಳನ್ನು ಪ್ರತಿಪಾದಿಸುವ ಕೆಲವರಿಗೆ ಆಗುವ ಹಾನಿಗಿಂತ ಕೋಟ್ಯವಧಿ ಜನರಿಗೆ ಅವರು ಹಕ್ಕು ಬಾಧ್ಯತೆಗಳ ಬಗ್ಗೆ ಅಗ್ರಹ ತಾಳುವದರಿಂದ ಕದಾಚಿತ್ ಹೆಚ್ಚು ಹಾನಿಯಾಗಬಹುದು. ಅವರು ಕ್ರೂರರ ಇಲ್ಲವೆ ಹೇಡಿಗಳ ಮರಣವನ್ನು ಹೊಂದಬಲ್ಲರು. ಆದರೆ ಆ ಕೆಲವರ ಮರಣದಿಂದ ಅಪೇಕ್ಷಿತ ಸಂತುಷ್ಟಿ ಮತ್ತು ಸುವ್ಯವಸ್ಥೆ ಸಮಾಜದಲ್ಲಿ ನೆಲಗೊಳ್ಳಲಾರದು. ಆದುದರಿಂದ ಹಕ್ಕುಗಳ ಮತ್ತು ಕರ್ತವ್ಯಗಳ ಪರಸ್ಪರ ಸಂಬಂಧವನ್ನು ತಿಳಿದುಕೊಳ್ಳುವದು ಅವಶ್ಯವಾಗಿದೆ. ಯೋಗ್ಯ ರೀತಿಯಿಂದ ಕರ್ತವ್ಯ ಮಾಡದೆ ಪ್ರಾಪ್ತವಾಗುವ ಹಕ್ಕುಬಾಧ್ಯತೆಗಳು ನಿರರ್ಥಕವಾದವುಗಳೆಂದು ಸೂಚಿಸುವ ಸಾಹಸವನ್ನು ನಾನು ಮಾಡುತ್ತೇನೆ. ಅವು ಬಲಾತ್ಕಾರಗಳಾಗಿದ್ದು ಬೇಗ ಬಿಟ್ಟುಗೊಟ್ಟಷ್ಟು ಹಿತಕರ. ಮೊದಲು ತನ್ನ ಕರ್ತವ್ಯವನ್ನು ಮಾಡದೆ ಮಕ್ಕಳಿಂದ ವಿಧೇಯತೆಯನ್ನಪೇಕ್ಷಿಸುವ ಮಂದಭಾಗ್ಯ ಪಾಲಕನು ನಿಂದ್ಯನೆ ಸೈ.

ಸ್ವೈರಚಾರಿಯಾದ ಗಂಡನು ತನ್ನ ನಿಷ್ಠ ಹೆಂಡತಿಯಿಂದ ಪ್ರತಿಯೊಂದು ಸಂದರ್ಭದಲ್ಲಿ ಅವರ ಸತ್ಕಾರಗಳನ್ನಪೇಕ್ಷಿಸುವದು ಧಾರ್ಮಿಕಾಚಾರದ ಭಂಗವೆ ಸೈ. ಆದರೆ ಮಕ್ಕಳಿಗಾಗಿ ತನ್ನ ಕರ್ತವ್ಯ ಮಾಡಲು ಯಾವಾಗಲೂ ತತ್ಪರನಾದ ಪಾಲಕನ ಅಪ್ಪಣೆಗಳನ್ನು ಕೇಳದಿದ ಮಕ್ಕಳು ಕೃತಘ್ನರಾಗಿರುವರಲ್ಲದೆ ಪಾಲಕನಿಗಿಂತ ತಾವೇ ಹೆಚ್ಚು ಹಾನಿಗೊಳಗಾಗುವರು. ಗಂಡ ಹೆಂಡತಿಯ ಸಂಬಂಧದಲ್ಲಿಯೂ ಹೀಗೆಯೇ ಹೇಳಬಹುದು. ಈ ಸರಳ ಮತ್ತು ಸಾರ್ವತ್ರಿಕ ನಿಯಮವನ್ನು ಕೂಲಿಕಾರರ ಒಡೆಯರ ರೈತರ ಮತ್ತು ಜಮೀನದಾರರ, ನರೇಂದ್ರರ ಮತ್ತು ಅವರ ಪ್ರಜೆಗಳ ಇಲ್ಲವೆ ಹಿಂದು ಮತ್ತು ಮುಸಲ್ಮಾನರ ಸಂಬಂಧದಲ್ಲಿಯೂ ಅನ್ವಯಿಸಿದ್ದಾದರೆ, ಜಗತ್ತಿನ ಉಳಿದ ಭಾಗಗಳಲ್ಲಿಯಂತೆ ಹಿಂದುಸ್ತಾನದಲ್ಲಿಯೂ ಇಂದು ನೀವು ಕಾಣುತಿರುವ ಜೀವನದಲ್ಲಿಯ ಮತ್ತು ವ್ಯವಹಾರದಲ್ಲಿಯ ವಿಷಾದಕರ ಅವ್ಯವಸ್ಥೆ ಮಾಯವಾಗಿ ಗೊಂದಲವಿಲ್ಲದೆ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಅತ್ಯಂತ ಸಮಾಧಾನದ ಸಂಬಂಧವನ್ನು ನೀವು ಕಾಣಬಹುದು. ಕರ್ತವ್ಯ ಮತ್ತು ಅದರಿಂದ ಉದ್ಭವಿಸುವ ಹಕ್ಕುಬಾಧ್ಯತೆಗಳ ಮನ್ನಣೆಯಿಂದಲೆ ನಾನು ಪ್ರತಿಪಾದಿಸುತಿರುವ ಸತ್ಯಾಗ್ರಹದ ನಿಯಮಗಳನ್ನು ಅನುಮಾನಿಸಬಹುದಾಗಿದೆ"

ಹಿಂದು ಮತ್ತು ಮುಸಲ್ಮಾನರಲ್ಲಿಯ ಸಂಬಂಧವನ್ನು ಉದಾಹರಣೆಯೆಂದು ತೆಗೆದುಕೊಂಡು ಗಾಂಧೀಜಿ ೨೯ ನೇ ತಾರೀಖು ಹಕ್ಕುಗಳು ಮತ್ತು ಕರ್ತವ್ಯಗಳು ಈ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಈ ರೀತಿ ವಿವರಿಸಿದರು.

"ತನ್ನ ನೆರೆಯ ಮುಸಲ್ಮಾನನ ಸಂಬಂಧದಲ್ಲಿ ಹಿಂದುವಿನ ಕರ್ತವ್ಯವಾವುದು? ಮಾನವನೆಂದು ಅವನೊಡನೆ ಮಿತ್ರತ್ವ ಬೆಳಸುವದೆ ಅವನ ಕರ್ತವ್ಯ. ಅವನ ಸುಖದುಃಖಗಳಲ್ಲಿ ಭಾಗಿಯಾಗುವದು, ಅವನು ಕಷ್ಟದಲ್ಲಿದ್ದಾಗ ಅವನಿಗೆ ಸಹಾಯ ಮಾಡುವದು ಕರ್ತವ್ಯವಾಗಿದೆ. ಅನಂತರವೆ ಅವನು ತನ್ನ ಮುಸ್ಲಿಮ ನೆರೆಯವನಿಂದ ಅದೇ ಬಗೆಯ ಸಹಾಯವನ್ನು ಅಪೇಕ್ಷಿಸಬಲ್ಲನು. ಅವನಿಗೆ ಕದಾಚಿತ್ ಆ ಬಗೆಯ ಸಹಾಯವೂ ಸಿಕ್ಕಬಲ್ಲದು. ಯಾವುದೊಂದು ಹಳ್ಳಿಯಲ್ಲಿ ಹಿಂದುಗಳು ಬಹುಸಂಖ್ಯರಾಗಿದ್ದು ಅವರ ಮಧ್ಯದಲ್ಲಿ ಕೆಲವೇ ಮುಸಲ್ಮಾನರಿರುವರೆಂದು ತಿಳಿಯುವಾ. ಆ ಕೆಲ ಮುಸಲ್ಮಾನರ ಬಗ್ಗೆ ಬಹುಸಂಖ್ಯ ಹಿಂದುಗಳ ಕರ್ತವ್ಯ ಬಹಳಿರುವದು. ತಮ್ಮ ಭಿನ್ನ ಧರ್ಮವು ಹಿಂದುಗಳು ತಮ್ಮನ್ನು ಕಾಣಬೇಕಾದ ರೀತಿಯಲ್ಲಿ ವ್ಯತ್ಯಯವನ್ನುಂಟುಮಾಡುತಿದೆಂದು ಮುಸಲ್ಮಾನರಿಗೆನಿಸದಷ್ಟು ಅದು ವಿಶುದ್ಧವಾಗಿರತಕ್ಕದ್ದು. ಅಂದರೇನೇ ಹಿಂದುಗಳಿಗೆ ಹಕ್ಕು ಪ್ರಾಪ್ತವಾಗುವದು. ಮುಸಲ್ಮಾನರು ಅವರ ನಿಜ ಮಿತ್ರರಾಗುವರು. ಮತ್ತು ಗಂಡಾಂತರದ ಪ್ರಸಂಗಗಳಲ್ಲಿ ಎರಡೂ ಜಾತಿಯವರು ಒಬ್ಬ ಮನುಷ್ಯರಂತೆಯೆ ಕೆಲಸ ಮಾಡಬಲ್ಲರು. ಅನೇಕ ಹಿಂದುಗಳಂತೆ ಕೆಲ ಮುಸಲ್ಮಾನರು ಸರಿಯಾದ ರೀತಿಯಲ್ಲಿ ವರ್ತಿಸದೆ ಪ್ರತಿಯೊಂದು ಕೃತ್ಯದಲ್ಲಿ ವಿರೋಧವನ್ನ ಪ್ರದರ್ಶಿಸುತ್ತ ನಡೆದರೆ ಪಾಶವೀವೃತ್ತಿಯ ಲಕ್ಷಣವದೆಂದು ಗೊತ್ತಾಗುವದು. ಈ ಪರಿಸ್ಥಿತಿಯಲ್ಲಿ ಅನೇಕ ಹಿಂದುಗಳ ಕರ್ತವ್ಯವಾವುದು? ಬಹುಸಂಖ್ಯಾಕರ ಪಾಶವೀ ಶಕ್ತಿಯಿಂದ ಅವರನ್ನು ಹತ್ತಿಕ್ಕುವದಂತೂ ಶಿಕ್ಷೆಯಾಗಿ ಅವರ ಕರ್ತವ್ಯವಲ್ಲ. ಅದು ಸಂಪಾದಿತವಾಗದ ಹಕ್ಕಿನ ಬಲಾತ್ಕಾರವೆ ಸೈ. ತಮ್ಮ ಸ್ವಂತ ಅಣ್ಣತಮ್ಮಂದಿರ ಪಾಶವೀ ವೃತ್ತಿಯನ್ನು ತಡೆಯುವಂತೆ ಅವರ ವೃತ್ತಿಯನ್ನು ತಡೆಯುವದು ಅವರ ಕರ್ತವ್ಯವಾಗಿದೆ. ಈ ಉದಾಹರಣೆಯನ್ನು ಇನ್ನಷ್ಟು ವಿವರವಾಗಿ ಬರೆಯುವ ಅವಶ್ಯ

— ಅನೇ ಭಟಕ್ಕೆ

## ಮೋಹನ ರುದ್ರ

ಪ್ರೊ. ಎಚ್. ಸಿ. ಭಾಭಾರವರ ಅಧ್ಯಕ್ಷತೆಯಲ್ಲಿ ಅಣುಶಕ್ತಿ ಸಂಶೋಧನೆಗಾಗಿ ಒಂದು ಸಂಶೋಧನ ಸಮಿತಿಯನ್ನು ಸ್ಥಾಪಿಸಿದ ಕೀರ್ತಿಯು ಶ್ರೀ ಸಿ. ರಾಜಗೋಪಾಲಾಚಾರಿಯವರಿಗೆ ಸಲ್ಲುತ್ತದೆ. “ ಭಾರತದ ಅಣು ಶಕ್ತಿಯ ಆಕರಗಳು ಅಪ್ರಯೋಜಕವಾಗಿ ಉಳಿಯಲಾರವು, ಅಣು ಶಕ್ತಿಯ ಸಂಶೋಧನೆಯನ್ನು ವಿನಾಶಕ ಚಟುವಟಿಕೆಗಳಿಗೆ ಗಂಟುಹಾಕುವುದು ತಪ್ಪು ” ಎಂದು ರಾಜಾಜಿಯು ಹೇಳಿಕೆ ಕೊಟ್ಟಿದ್ದಾರೆ.

ಅಣುಶಕ್ತಿ ಸಂಶೋಧನೆಯು ಪಾಶ್ಚಾತ್ಯ ಧನಿಕ ಜನಾಂಗಗಳ ಅತಿ ಖರ್ಚಿನ ಒಂದು ಚೌಲತ್ತಾಗಿದೆ. ಈ ಪ್ರಲಯ ದೇವತೆಯಾದ ರುದ್ರನನ್ನು ಉತ್ಸಾಹಗೊಳಿಸಲು ಅವರು ಲೆಕ್ಕವಿಲ್ಲದಷ್ಟು ಹಣವನ್ನು ವ್ಯಯಿಸಿದ್ದಾರೆ. ಅದಕ್ಕೆ ನಮ್ಮ ಮುಂಗಡಪತ್ರಿಕೆ ಎಷ್ಟರದು? ಅಷ್ಟು ಹಣವಿದ್ದಿದ್ದಾದರೆ ಜಗತ್ತಿನಲ್ಲಿ ಅತಿಕಡಿಮೆ ಪ್ರಮಾಣದಿಂದ ಭೂಮಿಯ ಉತ್ಪನ್ನ ತೆಗೆವ ನಮ್ಮ ಈ ಹಸಿದ ಭಾರತದಲ್ಲಿ ಪಶುಪೋಷಣೆ ಮತ್ತು ಆಹಾರ ಧಾನ್ಯಗಳನ್ನು ಬೆಳೆಸುವುದರತ್ತ ಗಮನಕೊಡುವದು ಅಧ್ಯ ಕರ್ತವ್ಯವಲ್ಲವೇ?

ಅಣುಶಕ್ತಿ ಸಂಶೋಧನೆಯು ಕೇವಲ ವಿನಾಶಕ್ಕಾಗಿಯೇ ಎನ್ನಲಾಗದೆಂಬುದೇನೋ ನಿಜ. ಆದರೆ ಇಲ್ಲಿಯವರೆಗೆ ಅದನ್ನು ಯಾರಾದರೂ ಬೇರೆಯ ಕಾರ್ಯಕ್ಕೆ ಬಳಸಿದುದುಂಟೇ? ನರಕದ ದಾರಿಯನ್ನು ಸದುದ್ದೇಶದಿಂದಲೇ ರಚಿಸಲಾಗಿದೆ. ಈ ಸಮಿತಿಯು ಅಂತಹ ಹೆದ್ದಾರಿಯಾಗಿ ಪರಿಣಮಿಸುವುದೇ?

ಅಣುಶಕ್ತಿಯು ಇಬ್ಬಾಯಿಯ ಕತ್ತಿಯೆಂಬುದನ್ನು ನಾವು ಒಪ್ಪುತ್ತೇವೆ; ಆದರೆ ಅಂತಹ ಆಯುಧವನ್ನು ಬಳಸಬೇಕಾದರೆ ಹೆಚ್ಚಿನ ಶಿಸ್ತು ಅವಶ್ಯಕ. ಬೆಂಕಿಯೇನೋ ಬಹಳ ಒಳ್ಳೆಯ ವಸ್ತು. ಅದು ನಾಗರಿಕತೆ ಮೂಡಿದಂದಿನಿಂದ ಮನುಷ್ಯನ ಪ್ರಗತಿಪಥಕ್ಕೆ ಬೆಳಕುಕೊಟ್ಟಿದೆ. ಈ ವಾದದಂತೆ ಹೋಗಿ ಮಗುವಿನ ಕೈಯಲ್ಲೊಂದು ಸೂಡಿಯನ್ನು ಕೊಟ್ಟು ಅದು ಮನೆಗೆ ಬೆಂಕಿಹಚ್ಚುವುದಿಲ್ಲವೆಂದು ನಾವು ಪರೀಕ್ಷಿಸಬಹುದೇ? ಈಗ ಎಲ್ಲಿ ನೋಡಿದರೂ ದುರಾಶೆ, ಮತ್ಸರ, ದ್ವೇಷಗಳು ಜಗತ್ತಿನಲ್ಲಿ ತುಂಬಿವೆ. ಅಂತಹ ಜಗತ್ತು ಈ ಆಯುಧವನ್ನು ಧರಿಸಲರ್ಹವೇ? ಅದು ಮದ್ದಿನ ಕೋಣೆಯಲ್ಲೊಂದು ಕಿಡಿಯಾಗಿ ಪರಿಣಮಿಸದೇ? ನಾವು ಬೆಂಕಿಯೊಡನೆ ಆಡುವುದು ಬೇಡ.

ನ್ಯೂಝಿಲೆಂಡಿನಿಂದ ಸ್ಪಷ್ಟವಾದ ಹೇಳಿಕೆಯೊಂದು ಬಂದಿದೆ. ಅಣುಬಾಂಬಿಗೆ ಬದಲಾಗಿ ಅದರಂತಹ ಇನ್ನೊಂದು ಶಸ್ತ್ರವನ್ನು ಸಂಶೋಧಿಸಿದ ಬಗ್ಗೆ ಅಕ್ಲೆಂಡ್ ವಿಶ್ವವಿದ್ಯಾನಿಲಯದ ಪ್ರೊ. ಥಾಮಸ್ ಲೀಚ್ ಎಂಬವರಿಗೆ ಬಹುಮಾನ ದೊರೆತಿದೆ. ಸಂಶೋಧನ ಕೇಂದ್ರವು ಫ್ಲೋರಿಡದಲ್ಲಲ್ಲ—ನ್ಯೂಝಿಲೆಂಡಿನಲ್ಲಿ ಸ್ಥಾಪಿಸಲ್ಪಟ್ಟಿತ್ತು. ಏಕೆಂದರೆ ಅಮೇರಿಕೆಯಲ್ಲಿ ಗೂಢಚಾರರ ಭಯವಿದೆಯಂತೆ. ಆ ಹೇಳಿಕೆಯು ಸ್ಪಷ್ಟವಾಗಿ: “ ಸಂಶೋಧಕರಾರಿಗೂ ತಮ್ಮ ಸಂಶೋಧನೆಯ ಉದ್ದೇಶ ಗೊತ್ತಿಲ್ಲ; ಮತ್ತು ಬ್ರಿಟನ್, ಸಂಯುಕ್ತ ಸಂಸ್ಥಾನ, ಆಸ್ಟ್ರೇಲಿಯಗಳಲ್ಲಾದರೂ ಈ ಬಗೆಯ ಯುದ್ಧ ಪದ್ಧತಿಯನ್ನು ಬಹಳ ಸ್ವಲ್ಪ ಜನರು ತಿಳಿದಿದ್ದಾರೆ. ವಿಜ್ಞಾನಿಗಳು ಮೇಲಿನವರ ಆಜ್ಞೆಯಂತೆ ಬಹಳ ಗುಪ್ತವಾಗಿ ಕೆಲಸ ನಡೆಸುತ್ತಿದ್ದಾರೆ ” ಎಂದು ನಿರ್ದೇಶಿಸುತ್ತದೆ.

ನಮಗೆ ತಿಳಿದಹಾಗೆ ನಾವು ಇತರರಂತೆ ಆಗಲಾರೆವೆಂಬ ನಂಬಿಗೆಯನ್ನು ತಾಳುವಷ್ಟು ನಮ್ಮ ಸಾರ್ವಜನಿಕ ಕಾರ್ಯಗಳಲ್ಲಿ ಬೇಕಾದ ಶಿಸ್ತನ್ನು ನಾವು ಸಂಪಾದಿಸಿ ಕೊಂಡಿಲ್ಲ. ಈ ಜ್ಞಾನವೃಕ್ಷವನ್ನು ಪಡೆದಿರುವುದರಿಂದ ಅಮೇರಿಕನ್ನರು ತಮ್ಮ ಶಕ್ತಿಮೀರಿ ಪ್ರಲೋಭನಕ್ಕೊಳಗಾದರು. ಮೂಲ ಅಣುಶಕ್ತಿ ಪ್ರಯೋಗ ಕರ್ತರಿಗಿಂತ ಹೆಚ್ಚಿನ ಆತ್ಮಸಂಯಮ ಮತ್ತು ಆತ್ಮನಿಗ್ರಹಗಳು ನಮ್ಮಲ್ಲಿವೆಯೆಂಬುದಕ್ಕೇನು ಸಾಕ್ಷಿ? ನಾವು ಆಗಲೆ ಈ ಪುಟ ವಿಭಾಗಗಳಲ್ಲಿ ಪ್ರತಿಭಟಿಸಿದ ಜರ್ಮನಿ ಜಪಾನುಗಳ ಲೂಟಿಯ ಪದಾರ್ಥಗಳನ್ನು ಪಡೆಯುವದೇ ಸರಕಾರದ ಧೋರಣವಾದರೆ (ಶ್ರೀ ರಾಜಗೋಪಾಲಾಚಾರಿಯವರು ಆ ಸರಕಾರದ ಒಬ್ಬ ಪ್ರಸಿದ್ಧ ಸದಸ್ಯರಾಗಿರುವುದರಿಂದ), ನಾವು ಗಾಳಿಯಸುದ್ದಿ ಸೂಚಿಸುವ ದಿಕ್ಕಿನತ್ತ ನೋಡಲು ಹೆದರಬೇಕಾಗುತ್ತದೆ. ನಾವು ಎಚ್ಚರುವದಕ್ಕಿಂತ ಮೊದಲೇ ರುದ್ರನನ್ನು ಆಹ್ವಾನಿಸಲಾರೆವು. ನಾವು ನಮ್ಮ ಮಿತಿಯನ್ನರಿತು ಅದಕ್ಕೆ ತಕ್ಕಂತೆ ನಮ್ಮ ಕಾರ್ಯಗಳ ಪಟ್ಟಿಯನ್ನು ರಚಿಸಬೇಕು.

ದೇಶವು ಬೇರೆಯ ಎಷ್ಟೋ ಕ್ಷೇತ್ರಗಳಲ್ಲಿ ಸಂಶೋಧನ ನಡೆಯಬೇಕೆಂದು ಕರೆಗೊಡು

## ಒಂದು ವಿಚಾರಪೂರ್ಣ ಸಲಹೆ

ಘಟನಾ ಸಮಿತಿಯ ಅಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಇತ್ತೀಚೆಗೆ ರಾಷ್ಟ್ರಧ್ವಜವನ್ನು ರೂಪಿಸುವುದರ ಸಲುವಾಗಿ ಒಂದು ತಾತ್ಕಾಲಿಕ ಸಮಿತಿಯನ್ನು ನಿಯಮಿಸಿದ್ದಾರೆ. “ಭಾರತೀಯ ಪ್ರಜಾಪ್ರಭುತ್ವಗಳ ಒಕ್ಕೂಟ” ವೆಂಬ ಮೊದಲಿನ ಹೆಸರಿಗೇ ಪಂ. ನೆಹರೂರವರು ಅಂಟಿಕೊಂಡಿರುವದು ಕಾಂಗ್ರೆಸ್ಸಿನ ದೃಷ್ಟಿಕೋನ ಇದ್ದಂತೆಯೇ ಇರುವದೆಂಬುದನ್ನು ಸೂಚಿಸುವದರಿಂದ ಮೇಲೆ ಹೇಳಿದ ಸಮಿತಿಗೆ ಅದು ಮಾರ್ಗದರ್ಶಿಯಾಗಬಲ್ಲದು. ಕಾಂಗ್ರೆಸ್ಸಿನ ಧ್ಯೇಯವು ಬದಲಾಗದಿದ್ದರೆ, ಅಂತಹ ಧ್ಯೇಯವನ್ನು ಪ್ರತಿಫಲಿಸುವ ರಾಷ್ಟ್ರಧ್ವಜದ ಗೌರವ ರಕ್ಷಣೆಗಾಗಿ ಅನೇಕರು ರಕ್ತತರ್ಪಣವಿತ್ತಿರುವುದರಿಂದ ಧ್ವಜ ನಿರ್ಮಿತಿಯ ಕಲೆಯ ದೃಷ್ಟಿಯಿಂದಲ್ಲದೆ ಬೇರೆಯ ದೃಷ್ಟಿಯಿಂದ ಯಾವ ಮೂಲಭೂತವಾದ ಬದಲಾವಣೆಯನ್ನೂ ಮಾಡಬೇಕಾದ ಅಗತ್ಯವಿಲ್ಲ.

ರಾಷ್ಟ್ರಧ್ವಜಕ್ಕೆ ಮೊದಲು ಮೇಲಿಂದ ಕೆಳಕ್ಕೆ ಬಿಳಿಯ, ಹಸಿರು ಮತ್ತು ಕೆಂಪು ಪಟ್ಟಿಗಳಿದ್ದವು. ಅವುಗಳ ಮೇಲೆ ಚರಕದ ಪಡಿಯಚ್ಚು ಮುದ್ರಿತವಾಗಿತ್ತು. ಆ ಬಳಿಕ (ಕೆಲವರು ತಿಳಿದುಕೊಂಡಂತೆ ಸಿಂಧೂರ ವರ್ಣದ ಉಡುಪನ್ನು ಧರಿಸಿದ ದೇಶಸೇವಿಕೆಯರ ತ್ಯಾಗವನ್ನು ಮನ್ನಿಸಲು) ಕೆಂಪು ಪಟ್ಟಿಯ ಬದಲು ಕಿತ್ತಳೆಯ ಬಣ್ಣದ ಪಟ್ಟಿಯನ್ನು ಸೇರಿಸಲಾಯಿತು; ಮತ್ತು ಚರಕವು ಮಧ್ಯದಲ್ಲಿ ಬರುವಂತೆಯೂ ಕ್ರಮವಾಗಿ ಕಿತ್ತಳೆ ಬಿಳಿಯ ಮತ್ತು ಹಸಿರು ಪಟ್ಟಿಗಳು ಬರುವಂತೆಯೂ ರೂಪಿಸಲ್ಪಟ್ಟಿತು.

ಧ್ವಜ ನಿರ್ಮಿತಿಯ ಮೂಲಭೂತ ತತ್ವಗಳಲ್ಲಿ ಆಕಾಶದ ಹಿನ್ನೆಲೆಯಲ್ಲಿ ಅದು ಸ್ಪಷ್ಟವಾಗಿ ಕಾಣಿಸಬೇಕೆಂಬುದೂ ಒಂದು. ಆದುದರಿಂದ ಅಂಚಿನಲ್ಲಿ ಬಿಳಿಯ ಪಟ್ಟಿ ಬರುವದನ್ನು ಮೊದಲೇ ತೆಗೆದು ಹಾಕಬೇಕಾಯಿತು. ಮೇಲೆ ಬಿಳಿಯ ಪಟ್ಟಿಯಿರುವ ಮೂಲ ಧ್ವಜವು ಸಮುರ ನೌಕೆಯೊಂದರ ನಡುಗಣೆಯ ತುದಿಯಲ್ಲಿ ಹಾರುತ್ತಿತ್ತೆಂದರೆ ಆಕಾಶದ ಹಿನ್ನೆಲೆಯಲ್ಲಿ ಅದು ಹಸಿರು ಮತ್ತು ಕೆಂಪು ಪಟ್ಟಿಗಳಿಂದ ಕೂಡಿದುದಾಗಿ ಕಾಣುತ್ತದೆ; ಬಿಳಿಯ ಪಟ್ಟಿಯು ಆಕಾಶದಲ್ಲಿ ಅದೃಶ್ಯವಾಗುವದು. ಬಿಳಿಯ ಪಟ್ಟಿಯು ಉಳಿಯಬೇಕಾದರೆ (ಅದೇಕೆ ಉಳಿಯಬೇಕೆಂಬುದನ್ನು ಈಗ ನಾನು ವಿಶದಪಡಿಸುತ್ತೇನೆ) ಅದು ಮಧ್ಯದಲ್ಲಿಯೂ ಅದರ ಮೇಲೆ ಮತ್ತು ಕೆಳಗೆ ಬೇರೆ ಬೇರೆ ಬಣ್ಣದ ಪಟ್ಟಿಗಳು ಬರುವಂತೆಯೂ ಮಾಡಬೇಕಾಗಿದೆ.

ಬಹಳ ವರ್ಣಾಂಶಗಳಾಗಿ ತೋರದೆ, ಸ್ಪಷ್ಟವಾಗಿ ನಿಲ್ಲುವ ಬಣ್ಣಗಳಿರುವುದು ಎರಡನೆಯ ನಿಯಮ. ಈ ದೃಷ್ಟಿಯಿಂದ ಈಗಿನ ಕಿತ್ತಳೆಯ ಬಣ್ಣದ ಪಟ್ಟಿಯು ಮೊದಲಿನ ಕೆಂಪು ಪಟ್ಟಿಗಿಂತ ಯಾವ ರೀತಿಯಿಂದಲೂ ಉತ್ತಮವೆನ್ನಲಾಗದು. ಹಳದಿ, ಸಿಂಧೂರ, ಅತಿರಕ್ತ ಮತ್ತು ಕಪಿಲ ವರ್ಣಗಳ ಬಾವುಟಗಳಿಲ್ಲವೆಂದಲ್ಲ. ಆದರೆ ಮೇಲೆ ಹೇಳಿದ ದೃಷ್ಟಿಯಿಂದ ಕೆಂಪು ಪಟ್ಟಿಯೇ ನಿಶ್ಚಯವಾಗಿಯೂ ಉತ್ತಮವೆನ್ನಬಹುದು:

ಕೂಲಿಕಾರರು ಕೆಂಪು ಬಣ್ಣದ ಪಕ್ಷಪಾತಿಗಳಾಗಿರುವುದರಿಂದ ಮೊದಲಿದ್ದ ಕೆಂಪು ಪಟ್ಟಿಯನ್ನಿಟ್ಟುಕೊಳ್ಳುವುದು! ಅವರೊಡನೆ ಒಪ್ಪಂದದಿಂದ ನಡೆದುಕೊಂಡಂತೆಯೂ ಆಗುತ್ತದೆ. ಕೆಂಪು ಬಣ್ಣವು ಕ್ರಾಂತಿಯ ಗುರುತಾದರೂ ಅದು ರಕ್ತಪಾತಪೂರ್ಣ ಕ್ರಾಂತಿಯ ಗುರುತೇ ಆಗಬೇಕೆಂಬ ನಿಯಮವಿಲ್ಲ. ಅದು ಭಾರತದಲ್ಲಿ ನಾವು ಕಂಡ ಅಹಿಂಸಾತ್ಮಕ ಕ್ರಾಂತಿಯ ಗುರುತೂ ಆಗಬಹುದಾಗಿದೆ.

ದೇಶಸೇವಿಕೆಯರ ತ್ಯಾಗವನ್ನು ಗೌರವಿಸುವುದಕ್ಕೋಸ್ಕರ ಸಿಂಧೂರ ವರ್ಣವನ್ನು ಬಳಸಿದ್ದಾದರೆ (ಅದು ಅಹಕ್ಕಲ್ಲವೆಂದು ನಾನು ಕೇಳಿದ್ದೇನೆ) ಪಾವಿತ್ರ್ಯದ ಪ್ರತೀಕವಾದ ಶ್ವೇತವರ್ಣವು ಭಾರತದ ಸ್ತ್ರೀತ್ವಕ್ಕೆ ಇನ್ನೂ ಹೆಚ್ಚು ಶೋಭಿಸದೇ? ಅವರು ನಿಜವಾಗಿಯೂ ಆಗಿರುವಂತೆ ಅದು ಅವರನ್ನು “ದಯಾ ಸಹೋದರಿಯರಾಗಿ” ಚಿತ್ರಿಸದೇ? ಆದುದರಿಂದ ಕಿತ್ತಳೆಯ ಬಣ್ಣವನ್ನು ತೆಗೆದು ಹಾಕುವದರಿಂದ ದೇಶಸೇವಿಕೆಯರು ವ್ಯಸನ ಪಡಬೇಕಾಗಿಲ್ಲ.

ಧ್ವಜವು ಜನರು ಮೆಚ್ಚುವಂತಿರಬೇಕೆಂಬ ಮೂರನೆಯ ನಿಯಮ. ಹಾಗಿರಬೇಕಾದರೆ ಅದು ವಕ್ತಿಯವಿವರಗಳಲ್ಲಿ ಬಹಳ ಜಟಿಲವಾಗಿಯೂ ಅತ್ಯಲಂಕೃತವಾಗಿಯೂ ಇರಕೂಡದು; ಇದ್ದರೆ ಬೀದಿಯಲ್ಲಿ ಹೋಗುವ ಸಾಮಾನ್ಯ ಮನುಷ್ಯನು ತನಗೆ ಒಪ್ಪುವ ರಾಷ್ಟ್ರಧ್ವಜದ ಚಿತ್ರವನ್ನು ಅದರಿಂದ ಚಿತ್ರಿಸಕೊಳ್ಳಲಾರನು. ಅದಕ್ಕೆ “ವ್ಯಾಘ್ರಮುಖ”ವು ಉಚಿತವಾಗಲಾರದೆಂಬುದೊಂದು ಉದಾಹರಣೆ.

ಈಗಿನ ಚರಕವನ್ನು ತೆಗೆದುಹಾಕಿ ಅದರ ಬದಲು ಪ್ರತೀಕವೊಂದನ್ನು ಇಡುವುದನ್ನು ಈ ದೃಷ್ಟಿಯಿಂದ ಪ್ರಯತ್ನಿಸಬೇಕಾಗಿದೆ. ಚರಕವೇನೋ ಇರಬೇಕು, ಆದರೆ ಪ್ರತೀಕ ರೂಪದಲ್ಲಿ ಮಾತ್ರ. ಈಗಿನ ಚರಕದ ಚಿತ್ರವು ಧ್ವಜ ಮಿತಿಯಲ್ಲಿ ಕೆಳಗಿನ ತೊಂದರೆಗಳನ್ನು ತಂದೊಡ್ಡುತ್ತದೆ:

(೧) ಚಿತ್ರಿಸುವದು ಅಷ್ಟು ಸುಲಭವಲ್ಲ.

(೨) ಅದು ಸಮಪಾರ್ಶ್ವಗಳುಳ್ಳದ್ದಲ್ಲ.

(೩) ಬಾವುಟವು ಚರಕದ ಚಕ್ರವನ್ನು ಹಡಗಿನ ನಡುಗಣೆಯ ಕಡೆಗೂ ಒಂದರೆಡೆ ಮುಖವಾದ ಕದಿರನ್ನು ತುದಿಯ ಕಡೆಗೂ ತೋರಿಸುವಂತಾದರೆ (ಬಾವುಟವು ನಡುಗಣೆಯ ಎಡಕ್ಕೆ ಹಾರುತ್ತಿರುವದನ್ನು ನಾನು ಎಣಿಸುತ್ತಿದ್ದೇನೆ) ಹಿಂಭಾಗವು ಅದೇ ಚಕ್ರವನ್ನು ಕದರಿನ ಮೊನೆ ವಿಮುಖವಾಗುವಂತೆ ತೋರಿಸಬೇಕು. ಈ ಮುಖ್ಯ ಸಂಗತಿಯನ್ನು ಬಹಳ ಜನರು ತಿಳಿದಿಲ್ಲ. ಆದುದರಿಂದ ಎಡಕ್ಕೆ ಚಕ್ರ ಬರುವಂತೆಯೂ ಕದಿರು ಬಲದ ಚಕ್ರದಕಡೆ ಮುಖವಾಗಿಯೂ ಇರುವಂತೆ ವಿಕಟ ಚಿತ್ರಗಳು ನಿರ್ಮಿತವಾಗುತ್ತವೆ.

ಬರಿಯ ಗಾಲಿಯು ಚರಕದ ಪ್ರತೀಕವಾಗಬಹುದೆಂದು ನನ್ನ ಮತ; ಬಿಡಿಸಲು ಸುಲಭ, ಸಮಪಾರ್ಶ್ವದ ಆಕೃತಿಯಿದೆ, ಎರಡೂ ಕಡೆಗಳಲ್ಲಿ ಗಲಿಬಿಲಿಗವಕಾಶ ಕೊಡದಂತೆ ಒಂದೇ ವಿಧವಾಗಿರುತ್ತದೆ.

ಚಕ್ರವು ಮನುಷ್ಯನು ಮೊದಲು ಕಂಡುಹಿಡಿದ ಅತ್ಯಂತ ಮುಖ್ಯವಾದ ಪದಾರ್ಥ. ಅದು ಎಲ್ಲ ನಾಗರಿಕತೆಗಳ ಅಡಿಪಾಯವಾಗಿದೆ; ಮತ್ತು ಭಾರತದ ಒಕ್ಕಲತನದ ಜಾತಿಯ ಜನರನ್ನು ಅದು ವಿಶೇಷವಾಗಿ ಪ್ರತಿನಿಧಿಸಬಹುದು; ಆದುದರಿಂದ ಅದು ಒಕ್ಕಲಿಗರಿಗೂ ಅವರ ಚಳವಳಿಗೂ ಚಿಹ್ನವಾಗಬಹುದು.

ಬಂಡವಾಲ ಪದ್ಧತಿಯನ್ನಾಗಲಿ, ಯಂತ್ರೀಕರಣವನ್ನಾಗಲಿ ಉದ್ದೇಶಪೂರ್ವಕವಾಗಿ ಸೂಚಿಸದೆ ದೇಶದ ವ್ಯಾಪಾರ ಮತ್ತು ಕೈಗಾರಿಕೆಗಳನ್ನು ಚಕ್ರವು ಸೂಚಿಸಬಲ್ಲುದು.

ಮತ್ತೂ ಮುಂದೆ ಸಾಗಿದರೆ “ ಕ್ರಾಂತಿಕಾರರೆ”ಂದು ಕೊಳ್ಳುವ ಪಕ್ಷದವರಿಗೂ ಒಪ್ಪಿಗೆಯಾಗುವಂತೆ ಚಕ್ರವು ಕ್ರಾಂತಿ ಚಕ್ರವಾಗಿ ಕ್ರಾಂತಿಯ ಗುರುತಾಗಬಹುದು.

ಕೊನೆಯದಾಗಿ, ಚಕ್ರವು ಬೌದ್ಧರ ಕಲ್ಪನೆಯಾದ ಧರ್ಮಚಕ್ರವನ್ನೂ ಸಮಾಜವನ್ನು ಆಧರಿಸುವ ಧರ್ಮದ ಸಮತ್ವಚಕ್ರವನ್ನೂ ಸೂಚಿಸಬಹುದು. ಹೀಗೆ ಭಾರತೀಯ ನಾಗರಿಕತೆಯ ಆಧ್ಯಾತ್ಮಿಕ ತಳಹದಿಯಾದ ಶಾಂತಿ ಮತ್ತು ಅಹಿಂಸೆಗಳ ಸಂದೇಶವನ್ನು ನಮ್ಮ ರಾಷ್ಟ್ರೀಯ ಚಿಹ್ನವು ಬೀರುವಂತೆ ಮಾಡಬಹುದಾಗಿದೆ.

ಒಟ್ಟಿನ ಮೇಲೆ ನಮ್ಮ ಧ್ವಜದಲ್ಲಿ ಕೆಂಪು, ಬಿಳಿಯ ಮತ್ತು (ತಾಯ್ನೆಲದ ಹಾಗೂ ಅವಳ ಮಕ್ಕಳಾದ ನೇಗಿಲ ಯೋಗಿಗಳ) ಹಸಿರು ಪಟ್ಟಿಗಳೂ ಅವುಗಳ ಮೇಲೆ ಯುಕ್ತವರ್ಣದ ಲಹಳಿಯ ಒಂದು ಚಕ್ರವೂ ಇರಬಹುದೆಂದು ಹೇಳಬಹುದಾಗಿದೆ.

ದತ್ತಾತ್ರೇಯ ಕಾಲೇಲಕರ

(ಧ್ವಜದ ಮೊದಲಿನ ಆಕೃತಿಯ ಪ್ರಸ್ತಾಪರನಾಗಿ ನಾನು ಆ ೩ ಪಟ್ಟಿಗಳು ಎಲ್ಲ ಜಾತಿಗಳನ್ನೂ ಚರಕವು ಅಹಿಂಸೆಯನ್ನೂ ಪ್ರತಿಕರಿಸುವುವೆಂದು ಹೇಳಬಹುದಾಗಿದೆ.)

ಮೋ. ಕ. ಗಾಂಧಿ

## ದನಗಳ ಪೀಳಿಗೆ

ಸರ್ ದಾತಾರಸಿಂಗರು ಕೊಯಿಮತ್ತೂರಿನಲ್ಲಿ ಭಾಷಣ ಮಾಡುತ್ತ ಖಾಸಗಿ ವ್ಯಕ್ತಿಗಳು ‘ಡೇರಿ ಫಾರ್ಮಿಂಗ’ವನ್ನು ಪ್ರಾರಂಭಿಸಬೇಕೆಂದು ಒಳ್ಳೆ ಆಸ್ಥೆಯಿಂದ ಬಿನ್ನವಿಸಿಕೊಂಡರು. ಇದು ಬಹಳ ಯೋಗ್ಯವಾದುದು. ಆದರೆ ದನಗಳೆಲ್ಲಿವೆ? ಕಳೆದ ಕೆಲವು ವರ್ಷಗಳಲ್ಲಿ ಸೈನಿಕರು ದನಗಳಿಗಾಗಿ ಎಷ್ಟೊಂದು ಬೇಡಿಕೆಮಾಡಿ ನಡೆಸಿದ ಹಾವಳಿ ಬೇರೆಯವರಿಗಿಂತ ಸರ್ ದಾತಾರ ಸಿಂಗರಿಗೆ ಹೆಚ್ಚು ಗೊತ್ತಿದೆ. ಭದ್ರ ಒಕ್ಕಲತನದ ತಳಹದಿಯ ಮೇಲೆ ಆಹಾರ ಸಮಸ್ಯೆಯನ್ನು ದೇಶವು ಬಿಡಿಸಬೇಕಾಗಿದ್ದರೆ ಬೀಜಕ್ಕಾಗಿಯೆಂದೂ ಹಾಲಿಗಾಗಿಯೆಂದೂ ಒಳ್ಳೆ ದನಗಳ ಉತ್ಪಾದನೆಯತ್ತ ನಾವು ಗಮನಿಸಲಿಕ್ಕೆ ಬೇಕು. ಕೂಡಲೆ ಅವಶ್ಯಕತೆಯನ್ನು ಪೂರಯಿಸಬೇಕಾದರೆ ಸಂಕರ ಜಾತಿಯ ದನಗಳನ್ನು ಹೆಚ್ಚಿಸುವದು ಸಂಕುಚಿತ ಧೋರಣೆಯು. ನಮ್ಮ ಬೇಡಿಕೆಗಳನ್ನು ಪೂರಯಿಸಬೇಕಾದರೆ ಸ್ಥಳೀಯ ಮಾದರಿಯ ದನಗಳ ಪೀಳಿಗೆಯನ್ನು ಹೆಚ್ಚಿಸಬೇಕು. ಸುವ್ಯವಸ್ಥಿತ ದನಗಳ ಜೋಪಾಸನಾ ಫಾರ್ಮಗಳನ್ನು ನಡೆಸುವ ವಿಶಾಲ ಧೋರಣೆಯನ್ನು ಸರಕಾರದವರು ಇಟ್ಟುಕೊಳ್ಳಬೇಕಾಗಿದೆ. ಸರಕಾರದವರು ಈವರೆಗೆ ಅನುಸರಿಸುತ್ತ ಬಂದ ಧೋರಣೆಯಿಂದ ದೇಶದ ಗೋಸಂಪತ್ತು ಹಾಳಾಗಿ ಹೋಗಿದೆ. ನಮ್ಮ ಸ್ವರಾಜ್ಯ ಸರಕಾರವು ಅಭಿವೃದ್ಧಿಯ ತನ್ನ ಕಾರ್ಯಕ್ರಮದಲ್ಲಿ ಈ ವಿಷಯಕ್ಕೆ ಪ್ರಥಮ ಪ್ರಾಶಸ್ತ್ಯವನ್ನು ಕೊಡುವದೆಂದು ಆಶಿಸುತ್ತೇವೆ.

—ಜೆ. ಸಿ. ಕುಮಾರಪ್ಪ

## ಬಟ್ಟೆಯ ಕೊರತೆ ಸಮಸ್ಯೆ

ಇದೀಗ ದೇಶದಲ್ಲಿ ಜವಳಿಯ ಕೊರತೆ ವಿಪರೀತವಾಗಿರುವದರಿಂದ ಅದನ್ನು ಹಿಂಗಿಸುವದಕ್ಕಾಗಿ ಗಿರಣಿಗಳ ಉತ್ಪಾದನೆಗೆ ಮೊರೆ ಹೋಗಬೇಕೆಂದು ಜವಳಿ ಉದ್ಯೋಗದ ಪುರಸ್ಕರ್ತರು ಸಾಮಾನ್ಯವಾಗಿ ಪ್ರತಿಪಾದಿಸುವುದುಂಟು. ಹಿಂದುಸ್ತಾನದಲ್ಲಿ ಜವಳಿ ಯಂತ್ರ, ಯಂತ್ರೋಪಕರಣಗಳ ಬ್ರಿಟಿಶ ಆಯಾತವನ್ನು ಲಕ್ಷಿಸುವುದಕ್ಕಾಗಿಯೆಂದು ನೇಮಿಸಲ್ಪಟ್ಟ ಸರ್ ಜಾನ್ ಗ್ರೀವ್ಜರು ಹಿಂದುಸ್ತಾನ ಯಂತ್ರ ಮತ್ತು ಯಂತ್ರೋಪಕರಣಗಳಿಗಾಗಿ ಸದ್ಯಕ್ಕೆ ಮಾಡಿದ ಬೇಡಿಕೆಯನ್ನು ಪೂರಯಿಸಬೇಕಾದರೆ ಇನ್ನೂ ೭ ವರ್ಷಗಳು ಹತ್ತುವವೆಂದು ಹೇಳಿರುವರು. ಅಷ್ಟು ಅವಧಿಯ ನಂತರ ಯಂತ್ರಗಳು ಪೂರಯಿಸಲ್ಪಟ್ಟರೂ ಅವೆಲ್ಲ ಜೋಡಿಸಲ್ಪಟ್ಟು ಉತ್ಪಾದನೆ ಪ್ರಾರಂಭವಾಗಲಿಕ್ಕೆ ಮತ್ತೊಂದು ಎರಡು ವರ್ಷಗಳು ಹತ್ತುವವು. ಆದರೆ ಖಾದಿಯ ಉತ್ಪಾದನೆ ಯಾವನೊಬ್ಬ ವ್ಯಕ್ತಿ ಟಕಳಿಯನ್ನು ಕೊಂಡ ಕೂಡಲೆ ಪ್ರಾರಂಭವಾಗುತ್ತದೆ. ಆದುದರಿಂದ ಬಟ್ಟೆ ಸಮಸ್ಯೆಯನ್ನು ತೀವ್ರವಾಗಿ ಬಿಡಿಸಲು ಖಾದಿ ಉತ್ಪಾದನೆಯನ್ನು ಕೈಕೊಳ್ಳುವದೆ ಯೋಗ್ಯ ಉಪಾಯ ಆಗಿದೆಂದು ವಿಶಿಷ್ಟ ಹಿತಸಂಬಂಧಗಳಿಗೆ ಸಂಬಂಧಿಸದೆ ಇದ್ದ ಯಾವನೊಬ್ಬನು ಒಪ್ಪದಿರಲಾರನು. ನಮ್ಮ ಪ್ರಾಂತಿಕ ಸರಕಾರಗಳಿಗೆ ಈ ಮಾತಿನ ಮನವರಿಕೆಯಾಗುವದೆ? ಇಲ್ಲವೆ ವಿಶಿಷ್ಟ ಹಿತಸಂಬಂಧದವರು ಅವರನ್ನು ಕುರುಡರನ್ನಾಗಿ ಮಾಡುವರೊ?

—ಜೆ. ಸಿ ಕುಮಾರಪ್ಪ

## ಹಕ್ಕು ಇಲ್ಲವೆ ಕರ್ತವ್ಯ

(೭ ನೇ ಪುಟದಿಂದ)

ಕತೆ ಇಲ್ಲ. ಪರಿಸ್ಥಿತಿ ತದ್ವಿರುದ್ಧವಾದರೂ ಇದೇ ನಿಯಮ ಅನ್ವಯಿಸುವುದೆಂದು ಮಾತ್ರ ನಾನು ಹೇಳಿ ಈ ವಿಷಯವನ್ನು ಮುಗಿಸುವೆನು. ತಾವು ಮೊದಲು ಕರ್ತವ್ಯಮಾಡಿಯೆ ಹಕ್ಕುಬಾಧ್ಯತೆಗಳನ್ನು ಪಡೆಯಬೇಕೆಂಬ ತತ್ವವನ್ನು ಜನರು ಆಚರಣೆಯಲ್ಲಿ ತರದೆ ಇರುವದರಿಂದಲೆ ಸದ್ಯದಲ್ಲಿ ಪರಿಸ್ಥಿತಿಯಿಷ್ಟೊಂದು ಗೊಂದಲದ್ದಾಗಿದೆ. ಇದನ್ನು ಸರಿಪಡಿಸುವದಕ್ಕಾಗಿ ಮೇಲೆ ನಾನು ಹೇಳಿದ್ದೆಲ್ಲ ಲಾಭಕರವಾಗಿ ಮತ್ತು ಸುಲಭವಾಗಿ ಅನ್ವಯಿಸಬಹುದಾಗಿದೆ.

“ಸಂಸ್ಥಾನಿಕರಿಗೆ ಮತ್ತು ರೈತರಿಗೆ ಇದೇ ನಿಯಮ ಅನ್ವಯಿಸುವದು. ಸಂಸ್ಥಾನಿಕರು ಜನರ ನಿಜವಾದ ಸೇವಕರಂತೆ ಕೆಲಸ ಮಾಡುವದು ಕರ್ತವ್ಯವಾಗಿದೆ. ಹೊರಗಿನ ಸತ್ತೆಯಿಂದ ದೊರೆತ ಅಧಿಕಾರದಿಂದ ಅವರು ಆಡಳಿತವನ್ನು ಸಾಗಿಸುವದಲ್ಲ; ಖಡ್ಗದ ಬಲುಮೆಯಿಂದಂತೂ ಅವರೆಂದಿಗೂ ಆಡಳಿತವನ್ನು ಸಾಗಿಸಲಾರರು. ಹೆಚ್ಚು ಜಾಣತನದ ಸೇವೆಯ ಅಧಿಕಾರದಿಂದಲೇ ಅವರು ಆಳುವರು; ರೈತರು ಸ್ವಯಂ ಕೊಡುವ ಕರಗಳನ್ನೆತ್ತುವ ಅಧಿಕಾರ ಅವರಿಗೆ ಅನಂತರವೆ ಪ್ರಾಪ್ತವಾಗುವದು. ತಮ್ಮ ಸ್ವಂತಕ್ಕಲ್ಲ, ಆದರೆ ತಮ್ಮ ರಕ್ಷಣೆಯಲ್ಲಿರುವ ಪ್ರಜೆಗಳಿಗಾಗಿ ಕೆಲವೊಂದು ಬಗೆಯ ಸೇವೆಯನ್ನು ಜನರಿಂದ ಒತ್ತಾಯಕ್ಕವಕಾಶವಿಲ್ಲದೆ ಅವರು ಅಪೇಕ್ಷಿಸಬಲ್ಲರು. ಅವರು ಈ ಸರಳ ಮತ್ತು ಮೂಲಭೂತ ಕರ್ತವ್ಯ ಮಾಡದಿದ್ದರೆ ರೈತರು ಪ್ರತಿಯಾಗಿ ತಮ್ಮ ಕರ್ತವ್ಯವನ್ನು ಮಾಡಬೇಕಾಗಿಲ್ಲ. ಇಷ್ಟೇ ಅಲ್ಲ ಆದರೆ ಸಂಸ್ಥಾನಿಕರ ಈ ಬಲಾತ್ಕಾರವನ್ನು ವಿರೋಧಿಸುವ ಕರ್ತವ್ಯವೂ ಅವರದಾಗುವದು. ಬಲಾತ್ಕಾರವನ್ನು ಅಥವಾ ದುರಾಡಳಿತವನ್ನು ವಿರೋಧಿಸುವದು ರೈತರ ಕರ್ತವ್ಯವೆ ಆಗಿದೆಂದು ಬೇರೆ ಶಬ್ದಗಳಲ್ಲಿ ಹೇಳಬಹುದಾಗಿದೆ. ಆದರೆ ಆ ವಿರೋಧವು ಕೊಲೆ, ಕೊರಗು ಮತ್ತು ಸುಲಿಗೆ ಸ್ವರೂಪದ್ದಾದರೆ ಕರ್ತವ್ಯದ ಹೆಸರಿನಲ್ಲಿ ಮಾನವನ ವಿರುದ್ಧ ಅಪರಾಧವನ್ನೆಸಗಿದಂತಾಗುವದು. ಕರ್ತವ್ಯ ಮಾಡುವಾಗ ಸ್ವಾಭಾವಿಕವಾಗಿ ಉಂಟಾಗುವ ಶಕ್ತಿ ಅಹಿಂಸಾತ್ಮಕ ಮತ್ತು ಅಜಯ್ಯ ಶಕ್ತಿಯಾಗಿದ್ದು ಸತ್ಯಾಗ್ರಹದಿಂದ ಅದು ಉದ್ಭವವಾಗುವದು.”

ತ್ತಿರುವಾಗ, ಇಂತಹ ಕೆಲಸ ಅಷ್ಟು ಮೊದಲು ಕೈಗೊಳ್ಳತಕ್ಕದ್ದೇನು? ನಮ್ಮ ಅಲ್ಪಪ್ರಮಾಣದ ದ್ರವ್ಯಗಳನ್ನು ಅದಕ್ಕಿಂತ ಹೆಚ್ಚು ಫಲಕಾರಿಯಾದ ಮಾರ್ಗಗಳಿಂದ ಉಪಯೋಗ ಮಾಡಿಕೊಳ್ಳಲಾರೆವೇನು?

ಜೆ. ಸಿ. ಕುಮಾರಪ್ಪ

# ವಾರದ ಪತ್ರ

## ರೋಗಕ್ಕೆ ಚಿಕಿತ್ಸೆ ಮಾಡಿರಿ

ಹಿಂದುಸ್ಥಾನದ ವಿಭಜನೆಗೆ ಕಾಂಗ್ರೆಸ್ಸು ಒಪ್ಪಿದ್ದು ಮನಸಿಲ್ಲದ ಮನಸಿನಿಂದಲೆ. ದೇಶವೇ ರಕ್ತಸ್ರಾವದಿಂದ ಸಾಯುವದನ್ನು ಅವರಿಂದ ನೋಡಲಾಗಲಿಲ್ಲ. ಯಾವುದೊಂದು ಘಟಕವನ್ನು ಅದರ ಇಚ್ಛೆಗೆ ವಿರುದ್ಧವಾಗಿ ಹಿಂದೀ ಒಕ್ಕೂಟದಲ್ಲಿ ಸೇರಿಸಿಕೊಳ್ಳಲು ಅವರೆಂದೂ ಇಚ್ಛಿಸಿದ್ದಿಲ್ಲ. ಅವರು ಪಾಶವೀ ಹಿಂಸೆಗೆ ಜೊಗ್ಗಿದರೆಂದು ಜನರು ಆಡಿಕೊಂಡರು. ಆದರೆ ಅವರು ಈ ಆರೋಪವನ್ನು ಅಲ್ಲಗಳೆಯುತ್ತಾರೆ. ವಸ್ತುಸ್ಥಿತಿಯು ಒತ್ತಡಕ್ಕೆ ಕಟ್ಟುಬಿದ್ದು ಅವರು ದೇಶದ ಹಿತಕ್ಕಾಗಿ ಕಹಿಗುಳಿಗೆಯನ್ನು ನುಂಗಿದ್ದರು. ಆದರೂ ಹಿಂಸೆ ಇನ್ನೂ ಯಥಾಸ್ಥಿತಿಯಾಗಿದೆ. ಈ ವಾರದ ಪ್ರಾರಂಭದಲ್ಲಿ ಲಾಹೋರದಲ್ಲಿ ಒಂದೇ ದಿನ ೧೦೦ ಮನೆಗಳು ಸುಡಲ್ಪಟ್ಟವೆಂದು ಸುದ್ದಿ ಬಂತು. ಲಾಹೋರದ ಮನೆಗಳೇನು ಗುಡಿಸಲುಗಳಲ್ಲ. ಅವು ಅರಮನೆಗಳಂತಿವೆ. ಇರಿತ, ಬಾಂಬಸ್ಫೋಟಗಳ ಸುದ್ದಿ ದಿನನಿತ್ಯ ಲಾಹೋರ, ಅಮೃತಸರ ಮತ್ತು ಕಲಕತ್ತೆಯಿಂದ ಬಂದು ಸುರಿಯುತ್ತಿವೆ. ಸಮಾಜದಲ್ಲಿರುವ ದುಃಸತ್ವಗಳು ಒಮ್ಮೆ ಉದ್ರೇಕಗೊಂಡವುಗಳು ಈಗ ಮುಂದಾಳುಗಳ ಹಿಡಿತಕ್ಕೂ ಸಿಗದಾಗಿವೆಯೆಂದು ಸುದ್ದಿ ಹಬ್ಬಿದೆ. ಇದನ್ನು ಪ್ರಸ್ತಾವಿಸಿ ತಾ. ೨೪ ಕ್ಕೆ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ಹೇಳಿದ್ದು: “ ಎಷ್ಟು ಸತ್ಯವೋ ಎಷ್ಟು ಸುಳ್ಳೋ ನಾಕಾಣೆ, ಆದರೆ ಎರಡೂ ಬಣಗಳು ಸಮಬಲವಾಗಿವೆಯೆಂದೂ ಹೋರಾಟದಿಂದಲೆ ಈ ಮಾತಿನ ನಿರ್ಣಯ ಮಾಡಲು ಅವು ಕಂಕಣಕಟ್ಟಿವೆಯೆಂದೂ ಹೇಳುತ್ತಾರೆ. ಆ ‘ ಈ ಮಾತು ’ ಎಂದರೆ ಯಾವುದೋ ಅದು ಮಾತ್ರ ನನಗೆ ಗೊತ್ತಿಲ್ಲ. ಪಾಕಿಸ್ತಾನ ಬರಲಿ ಬಾರದಿರಲಿ ಈ ಆತ್ಮಘಾತಕ ಕಲಹ ನಡೆಯುತ್ತಲೆ ಇರಬೇಕೆ? ಇತ್ತಂಡಗಳೂ ಪ್ರಮಾಣಬುದ್ಧಿಯಿಂದ ಸೇರಿ ಈ ಕೊಲೆ-ಕೊಳ್ಳಿಗಳನ್ನು ನಿಲ್ಲಿಸಲು ನಿರ್ಣಯಿಸಲಾರವೇಕೆ? ಗಲಭೆಗಳನ್ನು ಹತ್ತಿಕ್ಕಲು ಇನ್ನೂ ಆಳುವ ಜಾತಿಯ ಮುಖವನ್ನೆ ನೋಡಬೇಕೆ? ಹೊರಗಿನವರ ಆಳಿಕೆಯ ಕೊನೆ ಹತ್ತಿರವಾಗಿದೆ. ಈ ಪಶುವೃತ್ತಿಯನ್ನು ತಡೆದು, ಮಾನವಕುಲಕ್ಕೆ ಉತ್ತಮವೂ ಧೀರತರವೂ ಆದ ದಾರಿಯನ್ನು ತೋರುವ ಭಾರ ಪರಮಾತ್ಮನಿಗೇ ಸೇರಿದೆ. ”

ಅದೇ ಮರುದಿನ ಲಾಹೋರಿನ ಹಿಂದೂ, ಸೀಖ ಮತ್ತು ಮುಸ್ಲಿಂ ಮುಂದಾಳುಗಳು ಸೇರಿ ಒಂದು ಜತೆ ಶಾಂತಿ ಬಿನ್ನಹವನ್ನು ಹೊರಡಿಸಿದರೆಂಬ ಸುದ್ದಿಯನ್ನು ಪತ್ರಿಕೆಗಳು ತಂದವು. ಹಿಂಸೆಯನ್ನು ಬಗ್ಗುಬಡಿಯುವ ತಮ್ಮ ನಿರ್ಧಾರವನ್ನು ಅವರು ಅಡಿ ತೋರಿಸಿದ್ದರು. ಪಾಕಿಸ್ತಾನದ ಪುಷ್ಪಪ್ರಾಯವಾದ ಲಾಹೋರ ನಗರ ಭಸ್ಮೀಭೂತವಾಗುವದನ್ನು ನೋಡಲಾರೆನೆಂದು ಒಬ್ಬ ಮುಸ್ಲಿಂಲೀಗ್ ಅನುಯಾಯಿ ಹೇಳಿದನಂತೆ. ಲಾಹೋರನ್ನು ದಂಡಿನಕಾಯದೆಗೊಳಪಡಿಸಿರೆಂದು ಕೋರುವ ವಿನಂತಿಗಳು ವಾಯಿಸರಾಯರಿಗೆ ಹೋಗಿವೆಯೆಂದೂ ಸುದ್ದಿಯಿತ್ತು. ದುರ್ಭಾಗ್ಯ ಪಂಜಾಬ! ಕಳೆದ ೧೯೧೯ರ ದಂಡಿನ ಕಾಯದೆಯ ದಿನಗಳ ಭಯಾನಕತೆಯನ್ನು ಅದಿನ್ನೂ ಮರೆತಿಲ್ಲ. ಇನ್ನೊಮ್ಮೆ ಅದೇ ಕಾಯದೆಗೆ ಅದು ಬಲಿಯಾಗಬೇಕೆ? ಎಂದು ನೊಂದುಕೊಂಡರು ಗಾಂಧೀಜಿ. ಅದೂ ಜನರ ಕೋರಿಕೆಯಂತೆ!

ಮುಂದಾಳುಗಳು ಕೈಕೊಂಡ ಭೂತದಯಾಪರ, ರಾಷ್ಟ್ರೀಯ ಕ್ರಮವನ್ನು ಗಾಂಧೀಜಿ ಕೊಂಡಾಡಿದರು. “ ಇದು ಎಂದಾದರೂ ದಂಡಿನ ಕಾಯಿದೆಗಿಂತ ಕ್ಷೇಮಕರವಾದುದು. ದಂಡಿನ ಕಾಯದೆ ರೋಗ ಲಕ್ಷಣವನ್ನು ನಿವಾರಿಸಲೆಳಸುವದು ಹೊರತು ರೋಗವನ್ನೇನು ತಡಹುವದಿಲ್ಲ. ಆದಕ್ಕಿಂತ ಶಾಂತಿ ಬಿನ್ನಹವೆಷ್ಟೋ ಹೆಚ್ಚು ಗುಣಕಾರಿ. ಇದರಿಂದ ಎರಡೂ ಪಂಗಡಗಳು ಶಾಂತಿಯನ್ನು ಸ್ಥಾಪಿಸಬಲ್ಲವಾದರೆ ರೋಗವನ್ನೆ ತುಡುಕಿದಂತಾಯಿತು. ”

## ಯಾತನೆಯ ನೀತಿ

ಗಡಿನಾಡಿನಿಂದಲೂ ಪಂಜಾಬದಿಂದಲೂ ಹರದ್ವಾರಕ್ಕೆ ಬಂದುಸೇರಿದ ನಿರಾಶ್ರಿತರ ೧೬ ಪ್ರತಿನಿಧಿಗಳನ್ನು ಕುರಿತು ಗಾಂಧೀಜಿ ಹೇಳಿದ್ದು: “ ನೀವು ಅನುಭವಿಸಿದ ಯಾತನೆಯ ಕಥೆಗಳನ್ನು ತಿರುತಿರುಗಿ ಹೇಳುವದು ನಿಷ್ಪ್ರಯೋಜಕ; ಅದರಿಂದ ವಿಷಾದ ಹೆಚ್ಚುದ್ದೊಂದೇ ಬಂತು. ಆದರೆ ಒಂದೊಂದು ಯಾತನೆಯೂ– ಕಲಿಯುವ ಇಚ್ಛೆಯೊಂದು ನಮ್ಮಲ್ಲಿದ್ದರೆ– ತನ್ನದೇ ಆದ ಅಮೂಲ್ಯ ನೀತಿಯನ್ನು ಕಲಿಸುತ್ತದೆ. ಹಿಂದೆ ಅನುಕೂಲವಂತರಾಗಿದ್ದ ಎಷ್ಟೋ ಜನ ನಿರಾಶ್ರಿತರು ಈಗ ಇಸ್ಪೇಟು ಆಡುವದರಲ್ಲಿಯೋ ಜೂಜಾಡುವದರಲ್ಲಿಯೋ ಹೊತ್ತು ಹಾಳುಮಾಡುತಿರುವರೆಂದು ಕೇಳಿದ್ದೇನೆ. ಕೆಲವರಂತೂ ಸೊತ್ತುಗಳನ್ನು ಕೊಳ್ಳುವ ಅಥವಾ ಹಣ ಮಾಡುವ ಬೇರೆ ಹವ್ಯಾಸಗಳಿಗೆ ಕೂಡ ಬಿದ್ದಿದ್ದಾರಂತೆ ಇದು ಅಕ್ಷಮ್ಯ ಪಾತಕವೇ ಸರಿ. ಬಡ ನಿರಾಶ್ರಿತ ಸೋದರರೊಡನೆ ಒಂದಾಗುವ ಅಪೂರ್ವ ಅವಕಾಶ ನನಗೆ ದೊರಕಿದ್ದರೆ, ನನ್ನಲ್ಲಿರಬಹುದಾದ ಕೌಶಲವನ್ನೂ ನಾನು ಹಂದಿರಬಹುದಾದ ಬೇರೆ ಸಂಪತ್ತಿಯನ್ನೂ ಅವರೊಡನೆ ಹಂಚಿಕೊಳ್ಳುತಿದ್ದೆ ನೀವೆಲ್ಲರೂ ‘ ಪರಸ್ಪರ ಸಹಾಯಕ ಪ್ರಯತ್ನವನ್ನು ಕೈಕೊಳ್ಳಬೇಕು. ಹಾಗೆ ಮಾಡಿದರೆ, ಇಲ್ಲಿ ಹರಿದ್ವಾರದಲ್ಲಿ ನಡೆಸಿದ ಬಾಳುವೆಯ ಫಲವಾಗಿ ನೀವೆಲ್ಲಿ ಹೋದರೂ ಉತ್ತಮ ಸಹಯೋಗದ ಜೀವನವನ್ನು ಕಟ್ಟಿಕೊಳ್ಳಬಲ್ಲಿರಿ. ಹರಿದ್ವಾರ ಪವಿತ್ರ ತೀರ್ಥವಂತೆ. ನಾನೇನೂ ಹಾಗೆ ತಿಳಿದಿಲ್ಲ. ಆದರೆ ನೀವು ಸರಿಯಾಗಿ ನಡೆದುಕೊಂಡರೆ ನಿಮ್ಮಿಂದ ಈ ಸ್ಥಾನ ಪವಿತ್ರವಾದೀತೆಂದು ಹೇಳಬಲ್ಲೆ.

## ಮನೆ ಆಳಿ, ಮಾರ್ಗ ಆಳು

ಬ್ರಿಟಿಶ ಪಾರ್ಲಿಮೆಂಟನಲ್ಲಿ ಸಮಾರಂಭಪೂರ್ವಕವಾಗಿ ಹಿಂದುಸ್ತಾನವನ್ನು ವಿಭಜಿಸುವ ಮಸೂದೆಯನ್ನು ಪಾಸುಮಾಡಿ ಸರಕಾರ ಹಿಂದುಸ್ತಾನವನ್ನು ಎರಡು ರಾಷ್ಟ್ರಗಳಾಗಿ ಮಾಡಲಿದೆಯೆಂದು ವೃತ್ತಪತ್ರಿಕೆಯ ವರದಿಯೊಂದು ಸಾರುತ್ತದೆ. ಇದರಿಂದ ಗಾಂಧೀಜಿ ನೊಂದುಕೊಂಡರು. ಈ ದುರಂತದಲ್ಲಿ ಹೆಗ್ಗಳಿಕೆಯ ಮಾತೇನಿದೆ? ಹೋಗುವ ಕಾಲದಲ್ಲಿ ಒಂದು ಒಡೆ ಒದ್ದು ಹೋಗೋಣವೆಂದು ಬ್ರಿಟಿಶರ ಆಸೆಯೆ?

“ ಹಿರಿಯಣ್ಣ ಸತ್ಯಸಂಧನಾಗಿದ್ದರೆ, ” ಸೋಮವಾರದ ಲಿಖಿತ ಸಂದೇಶದಲ್ಲಿ ಗಾಂಧೀಜಿ ಹೇಳಿದ್ದರು, “ ಎಷ್ಟೇ ಒಗ್ಗದಿದ್ದರೂ ವಿಭಜನೆಯನ್ನು ತಡೆಯುವದರಲ್ಲಿ ಜಾಣತನ ತೋರಿಸದೆ ಅದರ ಬದಲು ಹಿಂದುಸ್ತಾನವೊಂದೇ ರಾಷ್ಟ್ರವೆಂದು ಯಾವಾಗಲೂ ತನ್ನ ನಡೆವಳಿಯಿಂದ ತೋರಿಸಿಯಾನು; ಮುಸ್ಲಿಂ ಅಲ್ಪಸಂಖ್ಯಾಕರನ್ನು ಅವರ ಜನ್ಮಭೂಮಿಯಲ್ಲಿ ಪರಕೀಯರಂತೆ ನಡೆಸಿಕೊಳ್ಳಲು ನಿರಾಕರಿಸುವದರಲ್ಲಿಯೇ ಅವನ ಜಾಣತನವುಂಟು.

“ ಇದಕ್ಕೆ ಹಿರಿಯಣ್ಣನ ಧರ್ಮದಲ್ಲಿ ಕ್ರಾಂತಿಕಾರಕ ಸುಧಾರಣೆಯಾಗಬೇಕು. ಎದುಕಾಣುವ ಸಂಗತಿಯನ್ನು ಕಾಣದಂತೆ ನಟಿಸೋಣ ಬೇಡ. ಎಲ್ಲರ ಕಣ್ಣು ಅಸ್ಪೃಶ್ಯರ– ಪರಿಶಿಷ್ಟ ವರ್ಗಗಳ– ಮೇಲಿದೆ. ಅದೇಕೆಂದರೆ ಅವರೀಗ ಹಿಂದೂ ಧರ್ಮದಲ್ಲಿ ಅತಿ ದುರ್ಬಲ ಸ್ಥಾನವಾಗಿದ್ದಾರೆ. ಪಾಕಿಸ್ತಾನದಲ್ಲಿ ಪರಿಶಿಷ್ಟ ವರ್ಗಗಳಿಗೆ (ಹಿಂದುಳಿದವರಿಗೆ) ಪ್ರತ್ಯೇಕ ಮತಾಧಿಕಾರದ ಆಶ್ವಾಸನ ಕೊಟ್ಟು ಮುಸ್ಲಿಂಲೀಗ್ ನಾಯಕರು ಮಾತಾಡುವದನ್ನು ಓದುತ್ತೇವೆ. ಪಾಕಿಸ್ತಾನ ಛಾಪಿನ ಇಸ್ಲಾಂಧರ್ಮವನ್ನು ಸ್ವೀಕರಿಸಲು ಹಿಂದುಳಿದವರಿಗೆ ಕರೆಯಾಗಿದ್ದೀತೇ ಇದು? ಬಲವಂತದ ಧರ್ಮಾಂತರದ ಕತೆಗಳನ್ನು ನೆನೆವರಿಕೆಗೆ ತಂದುಕೊಡಲು ನನಗೆ ಮನಸ್ಸಿಲ್ಲ. ಆದರೆ ಅವರ ಬಾಯಿಂದಲೇ ಇಷ್ಟೆಲ್ಲ ‘ಕೇಳಿದ ನಂತರ ಮುಂದಾಗಬಹುದಾದ ಅನಾಹುತವನ್ನು ಕಲ್ಪಿಸಿಕೊಂಡರೆ ಮೈಯೆಲ್ಲ ಮುಳ್ಳು ಮೂಡುವವು. ಈ ಭಯಕ್ಕೆ ಅಥವಾ ಭಯಪ್ರದರ್ಶನಕ್ಕೆ ಪ್ರತೀಕಾರಕವೇನು? ಹಿಂದೂ ಧರ್ಮದಲ್ಲಿ ಲವಲೇಶ ಅಸ್ಪೃಶ್ಯತೆಯಿರಕೂಡದು, ಹಿಂದುಸ್ತಾನದಲ್ಲಿ ಪರಿಶಿಷ್ಟ ವರ್ಗಗಳೆಂಬವು ಇರಕೂಡದು, ಕಾಯದೆಯ ದೃಷ್ಟಿಯಲ್ಲಿ ಯಾವದೇ ಜಾತಿಜಾತಿಭೇದಕ್ಕೆ ಅಂಗೀಕಾರವಿರಕೂಡದು— ಇದು ಹೊರತು ಬೇರೆ ಉಪಾಯವಿಲ್ಲ. ಹಿಂದುಗಳೆಲ್ಲ ಒಂದು — ಮೇಲಿನವರಿರಲಿ ಕೆಳಗಿನವರಿರಲಿ. ಉಪೇಕ್ಷೆಗೊಳಗಾದ ವರ್ಗಗಳೆಲ್ಲಕ್ಕೂ— ಅಂದರೆ ಹಿಂದುಳಿದ ವರ್ಗಗಳಿಗೆ ಮೂಲನಿವಾಸಿ ವರ್ಗಗಳಿಗೆ— ಶಿಕ್ಷಣ, ವಸತಿ ಸೌಕರ್ಯ ಮೊದಲಾದ ವಿಷಯಗಳಲ್ಲಿ ವಿಶೇಷ ಸವಲತ್ತು ದೊರಕಬೇಕು. ಮತದಾರ ಯಾದಿಯಲ್ಲಿ ಮಾತ್ರ ಎಲ್ಲರೂ ಒಂದೇ ಇರತಕ್ಕದ್ದು ಇದು ಇಂದಿಗಿಂತ ಹೀಣ ಸ್ಥಿತಿಯೆಂದು ಸರ್ವಥಾ ತಿಳಿಯಬಾರದು. ಅದು ಉತ್ತಮ ಸ್ಥಿತಿ. ಹಿಂದೂ ಧರ್ಮ ಈ ಉಚ್ಚ ಮಟ್ಟಕ್ಕೇರುವದೋ ಅಥವಾ ದುಷ್ಟ ಅಂಧಾಚಾರಗಳನ್ನೇ ಅತುಕೊಂಡು, ಕೆಟ್ಟ ಚಾಳಿಗಳನ್ನಷ್ಟೆ ಅನುಕರಿಸುತ್ತ ವಿನಾಶದ ಗರ್ಭದಲ್ಲಿ ಲೀನವಾಗುವದೋ? ”

## ಗಾಂಧೀಜಿ ಪಕ್ಷಪಾತಿಯೆ?

ಈಚೆಗೆ ಗಾಂಧೀಜಿಗೆ ಬರುತಿರುವ ಪತ್ರಗಳಲ್ಲಿ ನೂರಕ್ಕೆ ೯೯ ರಷ್ಟು ಬೈಗಳನ್ನೆ ತುಂಬಿಕೊಂಡು ಬರುತಿವೆ. ಮುಸ್ಲಿಮರು ಅವರನ್ನು ತಮ್ಮ ಜನ್ಮಶತ್ರುವೆಂದು ಬಗೆಯುತಿದ್ದರೆ ಹಿಂದುಗಳು ಅವರು ಮುಸ್ಲಿಮರ ವಿಷಯದಲ್ಲಿ ಪಕ್ಷಪಾತಿಗಳೆಂದು ಆರೋಪಿಸುತ್ತಾರೆ. ಪಾಕಿಸ್ತಾನದಲ್ಲಿ ಏನೇ ನಡೆಯಲಿ, ಹಿಂದೀ ಒಕ್ಕೂಟದಲ್ಲಿ ಹಿಂದುಗಳು ಮುಸ್ಲಿಮರೊಡನೆ ನ್ಯಾಯದಿಂದಲೂ ಗೌರವದಿಂದಲೂ ನಡೆದುಕೊಳ್ಳಬೇಕೆಂಬ ಗಾಂಧೀಜಿಯ ಉಪದೇಶವನ್ನೂ ಇದೇ ದೃಷ್ಟಿಯಿಂದ ನೋಡುವವರಿದ್ದಾರೆ. ಈ ಪಕ್ಷಪಾತದ ಆರೋಪವನ್ನು ಗಾಂಧೀಜಿ ಅಂಗೀಕರಿಸುವದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಪ್ರತಿಯೊಂದು ಸಂಸ್ಥೆಯೂ ಅದಕ್ಕೂ ಮಿಗಿಲಾಗಿ ಪ್ರತಿಯೊಂದು ಧರ್ಮವೂ ಅದು ನಡೆಸಿದ ಅತ್ಯಾಚಾರಗಳ ಒರೆಗಲ್ಲಿನ ಮೇಲೆ ಪರೀಕ್ಷಿಸಲ್ಪಡದೆ ಸದಾಚಾರಗಳ ಮೇಲಿಂದ ಒರೆಯಲ್ಪಡುತ್ತದೆ. ತಾವು ಸೂಚಿಸಿದ ಮಾರ್ಗ ನ್ಯಾಯಕ್ಕಿಂತ ಕಡಿಮೆಯಾದ್ದೆಂದು ಹೇಳುವ ಧೈರ್ಯ ಯಾರದು?–ಎಂದು ಕೇಳಿದರವರು. ದೊಡ್ಡ ಹಿಂದುಸ್ತಾನದ ಹಿಂದುಗಳು ನ್ಯಾಯವಾದುದನ್ನು ಮಾಡಲಾರದೆ ಹೋದರು, ಮಾಡಲೊಪ್ಪಲಿಲ್ಲ ಎಂದಾದರೆ ಆ ಮಾತು ಬೇರೆ. ನ್ಯಾಯವಾದುದನ್ನು ಮಾಡದ ಹಿಂದುಗಳಾಗಲಿ ಮುಸ್ಲಿಮರಾಗಲಿ ಬೇರಾರೇ ಆಗಲಿ ದುರ್ಗತಿಗೆ ಹೋಗುವರು. ಶಾಸನದಮುಂದೆ ವ್ಯಕ್ತಿಭೇದವಿಲ್ಲ. ತತ್ಕಾಲದಲ್ಲಿ ತಮ್ಮ ಸೂಚನೆಗಳು ಹಿಂದುಗಳನ್ನುದ್ದೇಶಿಸಿ ಇವೆಯೆಂದರು ಗಾಂಧೀಜಿ. ಏಕೆಂದರೆ ದ್ವಿರಾಷ್ಟ್ರ ಪ್ರಮೇಯವನ್ನು ತಮ್ಮ ಆಚರಣೆಯಿಂದ ಸಿದ್ಧಮಾಡಿ ಇಲ್ಲವೆ ಸುಳ್ಳುಮಾಡಿ ತೋರಿಸತಕ್ಕವರು ಅವರು ಈ ಸಂಬಂಧದಲ್ಲಿ ತಮ್ಮ ಸಲಹೆ ಧೀರ, ನಿಃಸ್ವಾರ್ಥ ಅಸ್ತಿಕ ಜನರಿಗಾಗಿ ಇದೆಯೆಂದು ಗಾಂಧೀಜಿ ಸ್ಪಷ್ಟಗೊಳಿಸ ಬಯಸಿದರು. ವ್ಯಕ್ತಿಗಳಾಗಲಿ ಜಾತಿಗಳಾಗಲಿ ತಮ್ಮ ಸ್ವಂತ ತಪ್ಪುಗಳಿಂದ ಸೋಲುವರಲ್ಲದೆ ಅನ್ಯರದರಿಂದಲ್ಲ. ನಮ್ಮದೇ ವಿಷಾದಮಯ ಇತಿಹಾಸವನ್ನು ನೋಡಿದರೆ ವೈಯಕ್ತಿಕ: ಲೋಭ ಸ್ವಾರ್ಥ, ಹೇಡಿತನಗಳ ಫಲವಾಗಿ ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡ ಉದಾಹರಣೆಗಳು ಹೆಜ್ಜೆ ಹೆಜ್ಜೆಗೂ ದೊರಕುವವು.

## ಸ್ವಂತ ಕಾಲ ಮೇಲೆ ನಿಲ್ಲುವದು

ಒಬ್ಬ ಪತ್ರಲೇಖಕ ಕೇಳಿದ್ದ: ಬ್ರಿಟಿಶ್ ಸೈನ್ಯವನ್ನು ಆಧರಿಸಿ ಒಂದು ಶತಮಾನಕ್ಕಿಂತಲೂ ಹೆಚ್ಚುಕಾಲ ಕಳೆದ ಹಿಂದುಸ್ತಾನ ಈಗ ಒಮ್ಮಿಂದೊಮ್ಮೆ ಅದಿಲ್ಲದೆ ಹೇಗೆ ಸಾಗಿಸಬಲ್ಲದು?

ಗಾಂಧೀಜಿಯ ಉತ್ತರ: “ ಈ ಪ್ರಶ್ನೆಯನ್ನು ಇನ್ನೊಂದು ಬಗೆಯಾಗಿ ನಾವು ಸ್ವರಾಜ್ಯಕ್ಕೆ ಅಯೋಗ್ಯರಲ್ಲವೆ? ಎಂದು ಕೇಳಬಹುದು. ಈ ಪ್ರಶ್ನೆಗೆ ಅನೇಕ ವರ್ಷ ಹಿಂದೆಯೆ ನಾನು ಉತ್ತರಕೊಟ್ಟಿದ್ದೆ. ಇಂದಾದರೂ ಅದೇ ಉತ್ತರ ಕೊಡುವೆ ಬ್ರಿಟಿಶ್ ಸೈನ್ಯಗಳು ನಿಜವಾಗಿ ಹೊರಟುಹೋದಮೇಲೆ ಹಿಂದುಸ್ತಾನಕ್ಕೆ ಬೆನ್ನಮೇಲಿಂದ ಅಸಹನೀಯ ಭಾರವೊಂದು ಇಳಿದಂತೆ ಆರಾಮವೆನಿಸದಿರದೆಂದು ನನಗೆ ಖಚಿತವಾಗಿ ವಿಶ್ವಾಸವಿದೆ. ಇಂದಿನ ಆಂತರಿಕ ಘರ್ಷಣೆಯ ಹಾಗು ಕೆಲವೊಮ್ಮೆ ಸಕಾರಣವಾದ ಅವಿಶ್ವಾಸದ ವಾತಾವರಣದಲ್ಲಿ ಒಂದೆರಡು ದಿನ ನಮಗೆ ಭಣಭಣ ಎನಿಸುವದರಲ್ಲಿ ಸಂದೇಹವಿಲ್ಲ. ಆದರೂ ಇಕ್ಕಟ್ಟಾದ ಉಸಿರು ಗಟ್ಟಿಸುವ ಕೋಣೆಯಿಂದ ಹೊರಬಂದವರಂತೆ ನಮಗೆ ಸಮಾಧಾನವಾಗುವದು. ಅಹಿಂಸಾದೃಷ್ಟಿಯಿಂದಷ್ಟೇ ಈ ಮಾತು ಹೇಳಿಲ್ಲ ಹಿಂಸೆಯ ದೃಷ್ಟಿಕೋನಕ್ಕೂ ಇದೇ ಅನ್ವಯಿಸುವದು ನಮ್ಮ ನಮ್ಮೊಳಗೆ ಕೊನೆತನಕ ಹೋರಾಡಬೇಕಾದರೂ ನಾವು ಕೈಲಾಗದ ಪರಾಧೀನತೆಯಿಂದ ಪಾರಾಗಿ ಹೋರಾಡಲು ಕಲಿಯಬೇಕು. ಇದೊಂದು ಭಯಂಕರ ಪಾಠ ನಿಜ. ಆದರೂ ಇಂದಿನ ಅಸಹಾಯತೆಗಿಂತ ಅದೇ ಎಷ್ಟೋಪಾಲು ಸುಖ. ಇಂದಿನ ಹಿಂದೂ ಮುಸ್ಲಿಂ ದ್ವೇಷ ಕೃತ್ರಿಮವೆಂದೂ ಅದೂ ನಿಷ್ಕ್ರಿಯತೆಯಿಂದ ಸಾಯುವದು ನಿಶ್ಚಿತವೆಂದೂ ನನಗೆ ಪೂರ್ಣ ನಂಬಿಗೆಯುಂಟು. ಇದರಲ್ಲಿ ದುಃಖದ ಸಂಗತಿಯೆಂದರೆ ಈ ರೋಗ ಬುದ್ಧಿಜೀವಿಗಳಿಗೆ ಕೂಡ ಅಂಟಿಕೊಂಡದ್ದು. ಈ ಕಾರಣದಿಂದ ಅದೇನು ಸಿಸ್ಪಸಮ್ಮತವಾಗಿಲ್ಲ. ಬದಲಿಗೆ ಬುದ್ಧಿಜೀವಿಗಳೇ ಅಶಿಷ್ಟರಾದರು. ಈ ಉನ್ಮಾದ ಹೋಗಿ ವಿವೇಕೋದಯವಾಗುವ ದಿನವನ್ನು ಕಾಣುವಷ್ಟು ಆಯುಷ್ಯ ಅವರಲ್ಲಿ ಕೆಲವರಿಗಾದರೂ ಇಲ್ಲದಿರದು. ಆಗ ಅವರು ತಮ್ಮ ಮೌಢ್ಯಕ್ಕೆ ತಾವೇ ನಗುವದು ಖಂಡಿತ. ಆದರೆ ಬ್ರಿಟಿಶರಿಗೆ ಮಾತ್ರ ಕೊನೆಯ ವರೆಗೆ ಇದೇ ಬುದ್ಧಿ ಉಳಿದು, ಹಿಂದುಸ್ತಾನಕ್ಕೆ ಶಾಂತಿದಾನ ಮಾಡುವ ಸಲುವಾಗಿ ಮತ್ತು ಇಲ್ಲಿ ಉಳಿಯುವ ದುರಾಶೆ ಉತ್ಪನ್ನವಾಗದಿರಲೆಂದಿಷ್ಟೇ ನಾನು ಹಾರೈಸುವೆ. ಅವರು ಹಿಂದುಸ್ತಾನಕ್ಕೆ

— ೧೦ ನೇ ಪುಟಕ್ಕೆ

# ಆಗಸ್ಟ ೧೫ ಕ್ಕೆ ಹಿಂದುಸ್ತಾನದಲ್ಲಿ ಎರಡು ಸಾಮಂತ ಸರಕಾರಗಳು

## ಬ್ರಿಟಿಶ್ ಪಾರ್ಲಮೆಂಟಿನಲ್ಲಿ ಮಸೂದೆ

ಜುಲೈ ೪ ನೇ ತಾರೀಕಿನ ದಿನ ಬ್ರಿಟಿಶ್ ಪಾರ್ಲಿಮೆಂಟನಲ್ಲಿ ಪ್ರಸಿದ್ಧಿಸಿದ ಹಿಂದುಸ್ತಾನ ಸ್ವಾತಂತ್ರ್ಯ ಮಸೂದೆಯನ್ವಯ ಆಗಸ್ಟ ೧೫, ೧೯೪೭ ಕ್ಕೆ ಹಿಂದುಸ್ತಾನ ಮತ್ತು ಪಾಕಿಸ್ತಾನ ಎಂಬ ಎರಡು ಸ್ವತಂತ್ರ ಸಾಮಂತ ಸರಕಾರ ಅಸ್ತಿತ್ವದಲ್ಲಿ ಬರುವವು.

ಪಾಕಿಸ್ತಾನ ಪ್ರದೇಶದಲ್ಲಿ ಪೂರ್ವ ಬಂಗಾಲ ಮತ್ತು ಪಶ್ಚಿಮ ಪಂಜಾಬವೆಂಬ ಎರಡು ಹೊಸಪ್ರಾಂತಗಳು ಸೇರುವುವು. ೧೯೩೫ನೆ ಕಾಯಿದೆಯನ್ವಯ ಘಟಿಸಲಾಗಿದ್ದ ಬಂಗಾಲ ಪ್ರಾಂತವು ಪೂರ್ವ ಮತ್ತು ಪಶ್ಚಿಮ ಬಂಗಾಲವೆಂದು ಎರಡು ಪ್ರಾಂತಗಳಾಗುವುವು.

ಯಾವುದೊಂದು ಡೊಮಿನಿಯನ್‌ದ ಶಾಸನ ಸಭೆಯು ಎರಡೂಡೊಮೀನಿಯನಗಳಿಗೆ ಒಬ್ಬನೆ ಗವರ್ನರ ಜನರಲ್ ಇರಬೇಕೆಂದು ನಿರ್ಣಯಿಸದಿದ್ದರೆ ಎರಡೂ ಡೊಮಿನಿಯನ್‌ಗಳಿಗೆ ಬ್ರಿಟಿಶ್ ಸರಕಾರದವರು ಪ್ರತ್ಯೇಕವಾಗಿ ಇಬ್ಬರು ಗವರ್ನರ ಜನರಲ್‌ರನ್ನು ನೇಮಿಸುವರು.

ಒಳಹೊರ ಆಡಳಿತಗಳಿಗೆ ಸಂಬಂಧಿಸಿದ ಕಾಯದೆಗಳನ್ನು ಮಾಡಲು ಆಯಾ ಶಾಸನ ಸಭೆಗಳಿಗೆ ಪೂರ್ಣ ಅಧಿಕಾರವಿದೆ ಬ್ರಿಟಿಶ್ ಕಾಯದೆಗೆ ವಿರುದ್ಧವಾಗಿದೆಂಬ ಕಾರಣದಿಂದ ಇಂಥ ಯಾವ ಕಾಯದೆಯೂ ಅಕ್ರಮವಾಗಲಾರದು.

ಆಗಸ್ಟ ೧೫ ರ ನಂತರ ಬ್ರಿಟಿಶ ಸರಕಾರದವರು ತಮ್ಮ ಹೊಣೆಯನ್ನು ಬಿಟ್ಟುಗೊಡುವರು.

ಯಾವದೊಂದು ಪ್ರಾಂತಿಕ ಮಸೂದೆಗೆ ಬ್ರಿಟಿಶ ಅರಸರ ಒಪ್ಪಿಗೆಯ ಅವಶ್ಯಕತೆಯಿಲ್ಲ. ಯಾವದೊಂದು ಕಾಯದೆಯನ್ನು ಅವರು ರದ್ದು ಗೊಳಿಸಲಾರರು. ಕಾಯದೆಯನ್ನು ಕಾರ್ಯರೂಪದಲ್ಲಿ ತರಲುಅವಶ್ಯಕ ಯೋಜನೆ ಕೈಕೊಳ್ಳುವ ಅಧಿಕಾರ ಗವರ್ನರ ಜನರಲ್‌ರಿಗೆ ಕೊಡಲಾಗಿದೆ.

ಎರಡೂ ಡೊಮೀನಿಯನ್ನಗಳಲ್ಲಿ ಸೈನ್ಯದ ಹಂಚುವಿಕೆಯನ್ನು ಗವರ್ನರ ಜನರಲ್‌ರು ಮಾಡುವರು. ಎರಡೂ ಡೊಮೀನಿಯನ್‌ಗಳಲ್ಲಿರುವ ಬ್ರಿಟಿಶ್ ಸೈನ್ಯಾಧಿಕಾರಿಗಳ ಮೇಲೆ ಮಾತ್ರ ಬ್ರಿಟಿಶ ಸರಕಾರದ ಅಧಿಕಾರವುಳಿಯುವದು. ಈಗ ಭಾರತ ಮಂತ್ರಿಗಳು ಮಾಡುತಿರುವ ಕಾರ್ಯವನ್ನು ಸದ್ಯದ ಮಟ್ಟಿಗೆ ಯಾವನೊಬ್ಬ ಬ್ರಿಟಿಶ್‌ಮಂತ್ರಿಯು ಮಾಡತಕ್ಕದ್ದು

ಬಂಗಾಲದಂತೆ ಪಂಜಾಬದಲ್ಲಿಯೂ ಪೂರ್ವ ಮತ್ತು ಪಶ್ಚಿಮ ಪಂಜಾಬಗಳೆಂದು ಎರಡು ಭಾಗಗಳಾಗುವವು. ಗವರ್ನರ ಜನರಲ್‌ರು ನೇಮಿಸುವ ಗಡಿ ಸಮಿತಿಗಳ ಅವಾರ್ಡಗಳನ್ವಯ ಹೊಸ ಪ್ರಾಂತಗಳ ಗಡಿಗಳನ್ನು ನಿರ್ಣಯಿಸಲಾಗುವದು.

ಸಿಲ್ಹೆಟ ಜಿಲ್ಹೆಯ ಜನರು ಸಾರ್ವತ್ರಿಕ ಮತದಾನದಿಂದ ಪೂರ್ವ ಬಂಗಾಲದಲ್ಲಿ ಸೇರಬಯಸಿದರೆ ಹಾಗೆ ಮಾಡಲು ಈ ಕಾಯದೆಯನ್ವಯ ಅವಕಾಶ ಕೊಡಲಾಗಿದೆ.

ವಿಭಜನೆಯ ನಂತರ ಬ್ರಿಟಿಶ್ ಪಾರ್ಲಮೆಂಟನಲ್ಲಿ ಪಾಸಾದ ಯಾವದೇ ಕಾಯದೆ ಹೊಸ ಡೊಮಿನಿಯನ್‌ಗಳಿಗೆ ಬಂಧನಕಾರಕವಾಗಲಾರವು.

ಪೂರ್ವಬಂಗಾಲ, ಪಶ್ಚಿಮ ಪಂಜಾಬ, ಸಿಂಧ, ಬ್ರಿಟಿಶ್ ಬಲುಚಿಸ್ತಾನ ಮತ್ತು ಸಾರ್ವತ್ರಿಕ ಮತದಾನದಿಂದ ಸರಹದ್ದ ಪ್ರಾಂತ ಪಾಕಿಸ್ತಾನದಲ್ಲಿ ಸೇರಬೇಕೆಂದಾದರೆ ಆ ಪ್ರಾಂತ ಇವಿಷ್ಟು ಪಾಕಿಸ್ತಾನ ಡೊಮಿನಿಯನ್‌ದಲ್ಲಿ ಸಮಾವೇಶವಾಗುವವು.

## ಒಂದು ಪ್ರಸಿದ್ಧ ಅಪರಾಧ ಸ್ವೀಕಾರ

ಒಬ್ಬ ಆಂಗ್ಲ ಸಹೋದರಿಯು ಗಾಂಧಿಯವರಿಗೆ ಹೀಗೆ ಬರೆಯುತ್ತಾಳೆ—

“ನನಗೆ ಬಹಳ ನಾಚಿಕೆಯಾಗುತ್ತಿದೆ, ವ್ಯಥೆಯಾಗುತ್ತಿದೆ. ಭಾರತವು ಬ್ರಿಟನ್ನನ್ನು ದೂರಬಾರದು, ತನ್ನ ತಪ್ಪುಗಳತ್ತ ಗಮನ ಕೊಡಬೇಕು ಎಂದು ನೀವು ಹೇಳಿದಷ್ಟೂ ನನ್ನ ವ್ಯಥೆ ಹೆಚ್ಚುತ್ತದೆ. ನೀವು ಹೇಳುವದರ ಅರ್ಥವೇನೆಂಬುದನ್ನೂ ನೀವು ಹಾಗೇಕೆ ಹೇಳುವಿರೆಂಬುದನ್ನೂ ತಿಳಿದಿದ್ದೇನೆಂದು ನನ್ನ ನಂಬಿಗೆ. ರಕ್ತಪಾತವಿಲ್ಲದೆ, ಅತ್ಯಂತ ಒಳ್ಳೆಯ ರೀತಿಯಿಂದ ಭಾರತವನ್ನು ಈ ಸಂಕಟದಿಂದ ಪಾರುಮಾಡಬೇಕೆಂದು ನೀವು ಎಷ್ಟರ ಮಟ್ಟಿಗೆ ಪ್ರತಿಜ್ಞಾಬದ್ಧರಾಗಿರುವಿರೆಂಬುದನ್ನೂ ನಾನು ಬಲ್ಲೆ. ಆದರೆ ನನ್ನ ಅತ್ಯವನ್ನೇ ನಾನು ಹೇಳಿಕೊಳ್ಳದಿರಲಾರೆ. ಭಾರತವನ್ನು ಇಂತಹ ಅಧ್ಯಾತ್ಮಿಕ ದುರಂತಕ್ಕೆ ತಂದು ಮುಟ್ಟಿಸಲು ಬ್ರಿಟಿಶರಾದ ನಾವೇ ಕಾರಣ; ಈ ಪರಿಸ್ಥಿತಿಯಲ್ಲಿ ಇಂದಿನ ಯೋಜನೆಯೇ ಅತ್ಯುತ್ತಮವಾಗಿರಬಹುದು, ಭಾರತವು ತನ್ನನ್ನು ಇಂತಹ ಸ್ಥಿತಿಗೆ ತರಗೊಡಬಾರದಾಗಿತ್ತೆನ್ನಬಹುದು, ಆದರೆ ಕಟ್ಟಕಡೆಯಲ್ಲಿ ಖಂಡಿತವಾಗಿ, ತಪ್ಪನ್ನು ನಿಶ್ಚಯವಾಗಿಯೂ ಸಂಪೂರ್ಣವಾಗಿಯೂ ನಮ್ಮ ತಲೆಯಮೇಲೆಯೇ ಹೊರಿಸಬೇಕಾಗಿದೆ. ಏಕೆಂದರೆ ನಮ್ಮ ಹಿಂದಿನ ಧೋರಣಗಳಾದ ಜಾತೀಯ ಚುನಾವಣೆಗಳು, ಇತರ ಸಂಚಿಕೆಗಳ ಪ್ರಭಾವಗಳು, ಭಾರತವನ್ನು ಹೀಗಾಗಗೊಟ್ಟ ನಮ್ಮ ದುರ್ಗ ಮತ್ತು ಇಂದು ಹೀಗೆ ಮನುಷ್ಯರು ನೈತಿಕವಾಗಿಯೂ ಅಧ್ಯಾತ್ಮಿಕವಾಗಿಯೂ ಕೊಳೆತು ಸಾಯುವ ಪರಿಸ್ಥಿತಿಗೆ ಬರುವ ವರೆಗೆ ಭಾರತಕ್ಕುಂಟುಕೊಂಡಿರುವದು- ಇವುಗಳು ಹಾಗಿವೆ. ಈಗಲಾದರೂ ನನಗೆ ತೃಪ್ತಿಯಿಲ್ಲ. ನಾವು ಹೇಡಿವಾಗಿ ವ್ಯವಹರಿಸುತ್ತಿಲ್ಲ. ಅಷ್ಟು ಹೇಳುವುದಾದರೆ ನಾವು ರಾಜಕೀಯ ಚದುರಂಗದ ಮನೆಯ ಮೇಲಿದ್ದೇವೆನ್ನಬಹುದು. ಹೀಗಿರುವಾಗ ನಾನು ವಿವಶಳೂ ಲಜ್ಜಿತಳೂ ಆಗದೆ ಹೇಗಿರಬಲ್ಲೆ? ಇಲ್ಲಿ ಆ ಬಗ್ಗೆ ಎಲ್ಲಿಯೂ ಪಶ್ಚಾತ್ತಾಪದ ಸುಳಿವಿಲ್ಲ. ಭಾರತದಲ್ಲಿ ಬ್ರಿಟನ್ನು ಬಹಳ ದೊಡ್ಡ ಕೆಲಸಮಾಡಿಬಿಟ್ಟದೆಯೆಂದೂ ಅದು ಹಾಗೆ ತನ್ನ ಕೆಲಸವನ್ನು ಸೊಗಸಾಗಿ ಕಡೆಹಾಯಿಸಿಬಿಟ್ಟಿದೆಯೆಂದೂ ಸಾಮಾನ್ಯರ ತಿಳುವಳಿಕೆಯಾಗಿದೆ. ಈಗಲಾದರೂ ಭಾರತದ ಜನರು ಅಥವಾ ಜನನಾಯಕರು ದ್ವೇಷಾಪ್ಪಿಶ್ಚಕ್ಕೆ ಹೋಗುವ ಮಾರ್ಗಭೇದದ ಮೇಲೆ ಭಾರತವನ್ನು ವಿಭಜಿಸಬೇಕೆನ್ನುವಂತೆ ಮಾಡಿದ ಕೀರುದು ನಮ್ಮನ್ನು ಬಿಟ್ಟಿಲ್ಲ. ಹಿಂದುಸ್ತಾನ ವಿಭಕ್ತವಾದರೂ ಆಗಲಿ, ದಂಗೆ ದರೋಡೆಗಳೂ ನಿರಾಶೆಗಳೂ ದೇಶ ಎನ್ನಿಸುವವರೆಗೂ ನಾವು ಅದನ್ನು ಹಿಡಿದುಕೊಂಡೆವು. ( ನಾವೇ ಸ್ಥಾಪಿಸಿದ ) ಆ ಸರಕಾರಕ್ಕೆ ಅದನ್ನು ಬಿಟ್ಟುಕೊಟ್ಟು ನಾವು ಹೋಗಲಿಲ್ಲ; ಭಾರತವು ಸ್ವತಃ ತನ್ನ ಭವಿಷ್ಯವನ್ನು ನಿರ್ಣಯಿಸಲು ಎಡೆಗೊಡಲಿಲ್ಲ. ಕಾರಾಗೃಹದ ಅಧಿಕಾರಿಯು ಒಂದೇ ಬಾಗಿಲನ್ನು ತೆರೆದಾಗ ಬಂದಿಗಳಿಗೆ ಆಯ್ಕೆಯ ಸ್ವಾತಂತ್ರ್ಯವೆಲ್ಲಿಬರುತ್ತದೆ? ಅನೇಕ ಶತಕಗಳಿಂದ ಹಿಂದೂ ಮುಸ್ಲಿಂ ಐಕ್ಯದ ಬಾಗಿಲನ್ನು ಭದ್ರವಾಗಿ ಮುಚ್ಚಿ ಉಳಿದ ಒಂದೇ ಒಂದು ಬಾಗಿಲಿಂದ ಹೊರಹೊರಡಿರೆನ್ನುವುದೊಂದು ಗರ್ಹ್ಯಕಾರ್ಯವೇಸರಿ. ಆಗ, ಅಳುವವನಿಗೆ—ಕಾರಾಗೃಹಾಧಿಕಾರಿಗೆ ಬಂದಿಗೆ ಸಮುತ್ರಮಾಡದ ಹಾನಿಯೊದಗಿದೆಯೆಂದು ನೀವು ಪದೇಪದೇ ಹೇಳುತ್ತೀರಿ. ಅದೆಲ್ಲವೂ ಸತ್ಯ. ಭಾರತದ ಸ್ವಾತಂತ್ರ್ಯದ ದಿನ ಕಟ್ಟಕಡೆಯದಾಗಿ ಬಂದಾಗ ಬ್ರಿಟಿಷ ಭಾರತಗಳೆರಡಕ್ಕೂ ಅದೊಂದು ಅಧ್ಯಾತ್ಮಿಕ ವಿಜಯವೆಂದು ನಾನು ಆಶಿಸುತ್ತಿದ್ದೆ. ಚಕ್ರಾಧಿಪತ್ಯವನ್ನು ಆಸ್ತಿಯಾಗಿ ಪಡೆದವರಿಗೆ ಸ್ವರ್ಗದ ರಾಜ್ಯವನ್ನು ಹೊಗಲು ಬಹಳ ಕಷ್ಟವಾಗುತ್ತದೆ. ಎಂದಾದರೂ ನಮ್ಮ ಜಂಭ, ಅತ್ಯಾಧಿಕ್ಯಭಾವ, ಅಧಿಕಾರವರ್ಗಗಳು ನಮ್ಮನ್ನು ಬಿಟ್ಟುಹೋದಾವೇ? ಕುರುಡರಾಗಿ ನಾವು ಕಾಣದಿರುವ ನಿಜಪಾಪದ ದೊಡ್ಡಸ್ಥಿತಿಯುಳ್ಳ, ನಮಗಿಂತ ವಸ್ತುತಃ ಹೆಚ್ಚು ನವರಾದ ಜನರನ್ನು ಕಡೆಗಣಿಸಿ ಮಾತಾಡುವುದನ್ನು ನಾವು ಎಂದು ನಿಲ್ಲಿಸುವೆವು? ಹಿಂದುಸ್ತಾನ ಕಷ್ಟಪಡುವುದು—ಆದರೆ ಅದು ಒಂದು ಉದ್ದೇಶಕ್ಕಾಗಿ. ಬ್ರಿಟನ್ನು ತಾತ್ಕಾಲಿಕವಾಗಿ ಕಷ್ಟದಿಂದ ತಪ್ಪಿಸಿಕೊಳ್ಳಲು ಹಂಚಿಕೆ ಹಾಕಿದೆ—ಆದರೆ ಏತಕ್ಕಾಗಿ? ನಾವು ಎರಡನೆಯ ಜಾಗತಿಕ ಯುದ್ಧದಲ್ಲಿ ಹೋರಾಡಿದೆವು ಮತ್ತು ಆ ರೀತಿಯಲ್ಲಿ ಕಷ್ಟಪಟ್ಟೆವೆಂಬುದು ನಿಜ. ಆದರೆ ನಾವು ಅವರಿಂದೇನಾದರೂ ಕೈಯ ಪಾಠವನ್ನು ಕಲಿತೆವೇ? ಅಷ್ಟೇನೂ ಕಲಿತಿಲ್ಲ. ಇಷ್ಟು ದುಃಖವನ್ನು ನಮಗೆ ತಂದೊಡ್ಡಿದ ಹಿಂದಿನ ಧೋರಣಗಳನ್ನೇ ನಾವು ಮುಂದುವರಿಸುತ್ತಿದ್ದೇವೆ. ಹಿಂದುಸ್ತಾನದಲ್ಲಿ ನಮ್ಮನ್ನು ತಿದ್ದಿಕೊಳ್ಳುವ ಒಳ್ಳೆಯ ಸಂದರ್ಭವಿತ್ತು; ಆದರೆ ನಾವು ಅದನ್ನು ಬಿಟ್ಟುಬಿಟ್ಟೆವು. ಅಯ್ಯೋ ಬಡ ಬ್ರಿಟನ್ನೇ! ನಾವು ಸ್ವಲ್ಪ ಬುದ್ಧಿವಂತರಿರಬಹುದು, ರಾಜಕೀಯ ತಂತ್ರದಲ್ಲಿ ನಿಪುಣರಿರಬಹುದು, ನೋಡಲಿಕ್ಕೂ ಸ್ವಲ್ಪ ಹೃದಯರೂ ಪ್ರಸನ್ನರೂ ಇರಬಹುದು—ಅದೇ ನಮ್ಮ ಧೋರಣವಾದಾಗ. ಆದರೆ ನಾವು ಅಧ್ಯಾತ್ಮಿಕವಾಗಿ ಸ್ವಲ್ಪ ಕುರುಡರೆಂದೇ ತೋರುತ್ತದೆ. ಆದರೂ ನಮ್ಮ ಅಂತರಂಗದ ಆಳದಲ್ಲಿ ಅತ್ಯುತ್ತಮ ಗುಣಗಳಿವೆಯೆಂದು ನೀವು ನಂಬಿದಿರಿ ಮತ್ತು ಅದನ್ನು ಯಾವಾಗಲೂ ಪ್ರಕಾಶಪಡಿಸಲು ಪ್ರಯತ್ನಿಸಿದಿರಿ. ನೀವು ಇನ್ನೂ ಹಾಗೆ ಮಾಡುತ್ತಿರುವಿರಿ— ಇಲ್ಲವೇ? ಅತ್ಯದ್ಭುತ ಉದಾರಭಾವದಿಂದ ನೀವು ಅಹಿಂಸೆಯನ್ನು ಪ್ರಯೋಗಿಸುತ್ತಿದ್ದೀರಿ. ಅದೇಕೆ ನಮ್ಮ ಹೃದಯದಿಂದ ಸದುತ್ತರವನ್ನು ಪಡೆಯವಾಗಿದೆ? ನಮ್ಮ ಅತ್ಯಾಧಿಕ್ಯಭಾವದ ಬೇರು ಆಳದ ವರೆಗೆ ವ್ಯಾಪಿಸಿದೆ—ಅದು ನಮ್ಮ ಕ್ರಿಸ್ತೋಪದೇಶ ವ್ಯಾಖ್ಯೆಯಲ್ಲಿ ಸಹ ಹೊಕ್ಕಿದೆ. ನೀವು ಅಲ್ಲಿ ಮಾಡುತ್ತಿರುವಂತೆ ಪ್ರಾಮಾಣಿಕವಾಗಿ ಈಗ ಇಲ್ಲಿಯೂ ಅಹಿಂಸಾಪ್ರಯೋಗವನ್ನು ನಡೆಸುವ ಅಗತ್ಯವನ್ನು ಅರಿತು ಅಹಿಂಸಾತ್ಮಕ ಚಟುವಟಿಕೆಗಳ ಸಮಿತಿಗಳಿದ್ದು ಕೆಲಸ ಮಾಡಲಾರವೇ? “ಅಹಿಂಸಾಪರ ಮನುಷ್ಯನಿಗೆ ಮೊದಲು ತಾನು ಸೊನ್ನೆಯಾಗಬೇಕು.” ಬ್ರಿಟಿಶರಾದ ನಮಗೆ ಅದು ಬಹಳ ಕಷ್ಟದ ಕೆಲಸ—ಎಲ್ಲರಿಗೂ ಕಷ್ಟವೇ; ನಮಗಂತೂ ವಿಶೇಷವಾಗಿ ಕಷ್ಟ. ಇಲ್ಲಿಯವರೆಗೆ ನಾವು ಮುಂಚಿನಂತೆ ಗ್ರಾಮಸಿಂಹಗಳಾಗಿಯೇ ಇದ್ದೆವು. ಭಾರತದ ದುರಂತವನ್ನು ಜನರು ಈಗ ಕಾಣಬಹುದಾಗಿದೆ. ಬ್ರಿಟನ್ನಿನ ದುರಂತ ಗುಪ್ತವಾಗಿದೆ. ಆದರೆ ಅದು ಅಲ್ಲಿದ್ದೇ ಇದೆ.”

ಮೊನ್ನೆ ಮೊನ್ನೆ ಗಾಂಧಿಯವರು ಒಬ್ಬ ತರುಣ ಅಮೇರಿಕನ್ನನಿಗೆಂದರು, “‘ಎಲ್ಲರೆದುರು ತಪ್ಪನ್ನು ಒಪ್ಪಿಕೊಳ್ಳುವದು ಆತ್ಮಕ್ಕೊಳ್ಳೆಯದು” ಎಂದು. ಮೇಲೆ ಹೇಳಿದುದು ಬ್ರಿಟಿಶರ ವಿಚಾರಬುದ್ಧಿಗೆ ಆಹಾರವೊದಗಿಸತಕ್ಕುದಾಗಿದೆ. ತಾವೇ ಬಹಳ ಕಾಲದಿಂದ ಬಿತ್ತಿದ ವಿಭಜನೆಯ ಬೀಜದ ಫಲವಾಗಿ ವಿಭಕ್ತವಾದ ಭಾರತವನ್ನು ತಾವು ಬಿಟ್ಟು ಹೋಗುತ್ತಿದ್ದೇವೆಂಬುದೇನೂ ಸಂತೋಷಪ್ರದರ್ಶನಕ್ಕೆ ಸಂಗತಿಯಲ್ಲ. ಸಂಯುಕ್ತ ಭಾರತಕ್ಕಾಗಿ ಕನಸು ಕಂಡು, ದುಡಿದ, ಕಷ್ಟಪಟ್ಟ ಕೋಟಿಗಟ್ಟಲೆ ಜನರಿಗೆ ಭಾರತದ ವಿಭಜನೆಯಿಂದ ಬಹಳ ನಿರಾಶೆಯುಂಟಾಗಿದೆ; ತಮ್ಮ ನ್ಯಾಯವಾದ ಕಾರ್ಯದಿಂದ ಭಾರತದ ಸಂಯುಕ್ತ ಸರಕಾರದವರು ವಿಭಜನೆಯಿಂದಾದ ದುಷ್ಪರಿಣಾಮಗಳನ್ನು ಪರಿಹರಿಸತಕ್ಕದ್ದೆಂದು ಗಾಂಧಿಯವರು ಪದೇಪದೇ ಹೇಳುತ್ತ ಬಂದಿದ್ದಾರೆ. ಅವರಿಗೆ ಆ ದರಂತೆ ನಡೆವ ನೈತಿಕಸಾಮರ್ಥ್ಯ ಉಂಟಾಗಲಿ!

—ಅಮೃತಕೌರ

## ಕೋಟ್ಯವಧಿ ಜನರ ಕಾಳಿಗಾಗಿ ಗಿರಣಿಗಳಿಗೆ ಅರಳೆ!

ಅರಳೆಯ ನಿರ್ಯಾತಕ್ಕೆ ಹಿಂದುಸ್ತಾನ ಸರಕಾರದವರು ಸದ್ಯಕ್ಕೆ ಮುಕ್ತದ್ವಾರ ಮಾಡಿರುವರು. ಸಾಗಾಗುತಿರುವ ನಮ್ಮ ಭೂಕ್ಷೇತ್ರದಲ್ಲಿ ಹೆಚ್ಚು ಎಕರೆ ಭೂಮಿಯಲ್ಲಿ ಅರಳೆ ಬೆಳೆಯಲಾಗುತಿದೆಂದು ಇದರ ಅರ್ಥವಾಗುವದು. ಪರದೇಶಸ್ಥ ಗಿರಣಿಗಾರರಿಗಾಗಿ ನಾವು ನಮ್ಮ ಅರಳೆಯನ್ನೆಲ್ಲ ಕಳಿಸಿಕೊಡತಕ್ಕದ್ದು. ಅದಕ್ಕೆ ಪ್ರತಿಯಾಗಿ ನಮ್ಮ ಜನರಿಗಾಗಿ ಸತ್ವದ ಬಗ್ಗೆ ಸಂಶಯವಿರದ ಕಾಳುಗಳನ್ನು ತರಿಸಿಕೊಳ್ಳಬೇಕು. ಪಾಲಿಶ್ ಮಾಡಲ್ಪಟ್ಟ ಬ್ರಾಝಿಲ್‌ದ ಅಕ್ಕಿಯ ಬಗ್ಗೆ ಮತ್ತು ಆಸ್ಟ್ರೇಲಿಯದ ಗೋದಿಯ ಬಗ್ಗೆ ಯಾವಾಗಲೂ ದೂರುಗಳಿದ್ದೇ ಇವೆ. ಹತ್ತಿ ಬೆಳೆವ ಭೂಮಿಯಲ್ಲಿ ಬಡಜನರ ಆಹಾರವಾದ ಕೆಂಜೋಳವನ್ನು ಬೆಳೆಯಬಹುದು. ನಮ್ಮ ಭೂಮಿಯ ಉಪಯೋಗವನ್ನು ಸಮಂಜಸ ರೀತಿಯಲ್ಲಿ ಮಾಡಿಕೊಳ್ಳಲಾರೆವೊ? ಭೂಮಿಗಳಲ್ಲಿ ಗಿರಣಿಗಳಿಗಾಗಿ ಹೆಚ್ಚು ಕಚ್ಚಾ ಮಾಲುಗಳನ್ನು ಬೆಳೆಯದೆ ಆಹಾರ ಪದಾರ್ಥಗಳನ್ನು ಬೆಳೆಯಲಾರೆವೊ?

ಆಹಾರ ಪದಾರ್ಥಗಳಂತಹ ಮುಖ್ಯ ಆವಶ್ಯಕ ಪದಾರ್ಥಗಳನ್ನು ಯಾವ ದೇಶವು ಆಮದು ಮಾಡಿಕೊಳ್ಳುವದೊ ಆ ದೇಶದ ರಾಜಕೀಯ ಸ್ವಾತಂತ್ರ್ಯ ಎಂದಿಗೂ ಭದ್ರವಾಗುಳಿಯಲಾರದು. ಭೂ ನೌಕಾ ಮತ್ತು ವಾಯುಬಲಗಳಲ್ಲಿ ಅತ್ಯಂತ ಸಮರ್ಥವಾಗಿದ್ದ ಇಂಗ್ಲಂಡದಂಥ ಬಲಿಷ್ಠ ರಾಷ್ಟ್ರವು ಕೂಡ ಜರ್ಮನಿಯ ಸಬ್‌ಮರಿನ್ ದಾಳಿಗೆ ಆಹುತಿಯಾಗುತಿರುವದರಲ್ಲಿದ್ದಿತು. ಇದೀಗ ನಾವು ಸ್ವರಾಜ್ಯದ ಮಾತನ್ನಾಡುತಿರುವೆವು. ನಿಜ ಸ್ವಾತಂತ್ರ್ಯಕ್ಕೆ ನಮ್ಮನ್ನು ಅಣಿಗೊಳಿಸುವಂತೆ ನಮ್ಮ ಆರ್ಥಿಕ ರಚನೆಯನ್ನು ನಾವು ಸರಿಪಡಿಸಿಕೊಳ್ಳಬೇಕಾಗಿಲ್ಲವೆ?

ಜೆ. ಸಿ. ಕುಮಾರಪ್ಪ

## ಉದ್ಯೋಗ ಅಥವಾ ವ್ಯಾಪಾರ

ಮದ್ರಾಸಿನಲ್ಲಿ ಒಂದು ರೋಗಶಾಸ್ತ್ರದ ಪ್ರಯೋಗ ಶಾಲೆಯನ್ನು ಉದ್ಘಾಟಿಸುವಾಗ ಡಾ. ಟಿ. ಎಸ್. ಎಸ್. ರಾಜನ್ನರು ಪಾಶ್ಚಾತ್ಯ ವೈಜ್ಞಾನಿಕ ವೈದ್ಯಕೀಯ ಪದ್ಧತಿಯ ಪರವಾಗಿ ಮಾತಾಡಿದರೆಂದು ಸುದ್ದಿಯಿದೆ: “ಜಗತ್ತಿನಲ್ಲಿ ಅದು ತನ್ನ ಸುರಕ್ಷಿತತೆ ಮತ್ತು ಕ್ರಮದಲ್ಲಿ ಅಪ್ರತಿಮವಾಗಿದೆ” ಎಂದರಂತೆ. ಬಹಳ ವಿಷಯಗಳಲ್ಲಿ ಮತ್ತು ಅಭ್ಯಾಸ ಕ್ರಮದಲ್ಲಿ ಪಾಶ್ಚಾತ್ಯ ಪದ್ಧತಿಯು ನಮಗೆ ಕಲಿಸುವುದು ಬಹಳವಿದೆಯೆಂಬುದಕ್ಕೆ ನಾವು ಒಪ್ಪುತ್ತೇವೆ. ಆಚರಣೆಯಲ್ಲಿ ಪಾಶ್ಚಾತ್ಯ ಪದ್ಧತಿಯ ವೈದ್ಯರು ವಿಜ್ಞಾನಕ್ಕನುಗುಣವಾದ ಸೇವಾಬುದ್ಧಿಯನ್ನು ತೋರಿಸಿಲ್ಲ. “ಒಂದು ಪದ್ಧತಿಯೆಂದು ಅದು ಇರಬೇಕಾಗಿದೆ. ಪ್ರಗತಿಶೀಲರು ಅದನ್ನು ಬಲ್ಲರು ಮತ್ತು ಮನುಷ್ಯರ ರೋಗಗಳಿಗೆಲ್ಲ ಅದ್ವಿತೀಯವಾದದ್ದೆಂದು ಆ ಪದ್ಧತಿಯನ್ನು ಗೌರವಿಸುವರು” ಎಂಬ ಅವರ ಮಾತಿಗೆ ನಾವು ಒಪ್ಪಲಾರೆವು. ವಿಜ್ಞಾನದ ನಿಜವಾದ ಪರೀಕ್ಷೆಯು ಪ್ರಯೋಗ ಶಾಲೆಯಲ್ಲಿ ಮಾತ್ರವಲ್ಲ ಕಾರ್ಯಕ್ಷೇತ್ರದಲ್ಲೂ ಇದೆ. ಜ್ಞಾನದ ಲಾಭವನ್ನು ಜನರು ಪಡೆಯಬೇಕಾಗಿದೆ. ಆಗ ಮಾತ್ರ ಅದು ವೈಜ್ಞಾನಿಕವಾದೀತು. “ಕೆಟ್ಟ ವೈದ್ಯರಿರಬಹುದೆ”ಂದು ಡಾ. ರಾಜನ್ನರೇ ಒಪ್ಪಿಕೊಂಡಿದ್ದಾರೆ. ಹೌದು, ಆದರೆ ಆ ಪದ್ಧತಿಯಲ್ಲಿ ಪರಿಣತಿ ಪಡೆದ ಎಲ್ಲರಲ್ಲೂ ಇದೊಂದು ನಿಯಮವೇ ಆಗಿದೆಯೆನ್ನಬಹುದು. ಪಾಶ್ಚಾತ್ಯ ಪದ್ಧತಿಯ ಜೀವನಕ್ಕೂ ಧ್ಯೇಯಕ್ಕೂ ಅವರು ಹೊಂದಿಕೊಂಡಿದ್ದಾರೆ. ಅವರು ವಿಷಯಾಸಕ್ತರಾಗಿದ್ದಾರೆ— ಅವರು ಬರಿಯ ಮದ್ದಿನ ವ್ಯಾಪಾರಿಗಳಾಗಿದ್ದಾರೆ.

ಬಹುಜನ ಡಾಕ್ಟರರು ಪ್ರಸಿದ್ಧ ಔಷಧಗಳ ಅಧಿಕೃತ ಮಾರಾಟಗಾರರಾಗಿದ್ದಾರೆ. ವೈಜ್ಞಾನಿಕ ಪ್ರಯೋಗಶಾಲೆಗಳು ಹಾಕುವ ದರವಾದರೂ ನಮ್ಮ ಜನ ಕೊಡಲಾರದಷ್ಟಾಗುತ್ತದೆ. ಡಾಕ್ಟರರಿಗೆ ಬಹಳ ಖರ್ಚು ಬೀಳುತ್ತದೆಂಬುದೇನೋ ನಿಜ. ಅವರು ಪ್ರತಿಯೊಂದನ್ನೂ ಪರದೇಶಗಳಿಂದ ತರಿಸಿಕೊಳ್ಳಬೇಕಾಗಿದೆ. ಅವರ ಮೇಜಿನ ಮೇಲಿರುವ ಆಳುಗಳನ್ನು ಕರೆವ ಗಂಟೆ ಕೂಡ ಹೊರದೇಶದಿಂದ ಬಂದದ್ದೇ! ಅವರು ಪಟ್ಟಣಿಗರಿಗೆ ತಮ್ಮ ಜ್ಞಾನವನ್ನು ನಿಶ್ಚಿತ ದರಕ್ಕೆ ಮಾರುವವರು. ಅದುದರಿಂದಲೇ ನಾವು ಈ ಜನರನ್ನು ವ್ಯಾಪಾರಿಗಳೆಂದು ಗಣಿಸುತ್ತೇವೆ. ಉದ್ಯೋಗಿಗಳು ಅನ್ನಕ್ಕಾಗಿ ಮಾತ್ರ ಕೆಲಸ ಮಾಡಬಾರದು. ರೋಗಿಯು ಸ್ವಸಾಮರ್ಥ್ಯಕ್ಕನುಗುಣವಾಗಿ ಕೊಟ್ಟದ್ದನ್ನು ಅವರು ಸ್ವೀಕರಿಸಬೇಕಲ್ಲದೆ ನಿಶ್ಚಿತ ಫೀ ಇಡಬಾರದು.

ಈ ದೃಷ್ಟಿಯಿಂದ ಆಯುರ್ವೇದ ವೈದ್ಯರೂ ಹಕೀಮರೂ ಉದ್ಯೋಗಿಗಳು. ನಮ್ಮ ಹಳೆ ಪದ್ಧತಿಯ ಚಿಕಿತ್ಸೆಯು ಎಲ್ಲರಿಗೂ ಸಿಗಬಹುದಾದುದು, ಮತ್ತು ಎಂಥ ದರಿದ್ರನೂ ತೆಗೆದುಕೊಳ್ಳಬಹುದಾದುದು. ಈಗಿನ ಜ್ಞಾನವನ್ನು ವ್ಯವಸ್ಥೆಗೊಳಿಸುವುದೇ ನಮಗೆ ಬೇಕಾದುದು. ಆಯುರ್ವೇದ ವೈದ್ಯರೂ ಹಕೀಮರೂ ಜನರಿಗೆ ಸೇರಿದವರು ಮತ್ತು ಬಹಳವಾಗಿ ಪರಂಪರಾಗತವಾದ ಸೇವಾಬುದ್ಧಿಯುಳ್ಳವರು ಅವರು ಈಗಲೂ ಉದ್ಯೋಗಿಗಳಾಗಿಯೇ ಉಳಿದಿದ್ದಾರೆ. ನಮಗೆ ಅವರಿಲ್ಲದೆ ಸಾಧ್ಯವಿಲ್ಲ. ಜನರ ಅವಶ್ಯಕತೆಗೆ ಹೊಂದಿಕೆಯಾಗಿರುವುದರಿಂದ ಅವರ ರೋಗನಿದಾನ ಮತ್ತು ರೋಗಪರೀಕ್ಷಣಗಳು ಹೆಚ್ಚು ವೈಜ್ಞಾನಿಕವಾಗಿವೆ.

—ಜೆ. ಸಿ. ಕುಮಾರಪ್ಪ

## ರಕ್ಷಿಸಿರಿ ಎಮ್ಮನು!

ವನಸ್ಪತಿಯನ್ನು ಬಳಸುತಿರುವವರಿಂದ ಬರುತಿರುವ ಪತ್ರಗಳಲ್ಲಿ ಹೆಣ್ಣುಮಕ್ಕಳಿಂದ ಬಂದವುಗಳು ಹೆಚ್ಚು ಮಹತ್ವದ್ದಾಗಿವೆ. ದಕ್ಷಿಣದಲ್ಲಿಯ ಒಬ್ಬ ಪ್ರಮುಖ ಹೆಣ್ಣುಮಗಳಿಂದ ಬಂದ ಪತ್ರವಿದು “ನಿಮ್ಮ ಅಭಿಪ್ರಾಯಕ್ಕೆ ನನ್ನ ಒಪ್ಪಿಗೆಯಿದೆ; ವನಸ್ಪತಿಯು ಅಪಾಯಕರವಾಗಿಲ್ಲೆಂದು ಸ್ಪಷ್ಟವಾಗಿ ನಿರ್ಣಯಿಸಲ್ಪಡುವವರೆಗೆ ಅದರ ಉತ್ಪಾದನೆಯನ್ನು ನಿರ್ಬಂಧಿಸಲಿಕ್ಕೆ ಬೇಕೆಂದು ನನಗನಿಸುತ್ತದೆ. ‘ಡಾಲ್ಡಾ’ದ ಉಪಯೋಗದಿಂದ ತಮ್ಮ ಕುಟುಂಬದಲ್ಲಿಯ ಕೆಲ ಜನರ ಆರೋಗ್ಯದ ಮೇಲೆ ಬಹಳ ಕೆಟ್ಟಪರಿಣಾಮವಾಯಿತೆಂದು ನಂಬಲು ಪ್ರಬಲ ಕಾರಣಗಳನ್ನು ಕಂಡುಕೊಂಡ ಅನೇಕ ಹೆಣ್ಣುಮಕ್ಕಳು ಇದೇ ಬಗೆಯ ಅಭಿಪ್ರಾಯಪಡುತಿರುವರೆಂಬುದಾಗಿ ನನಗೆ ಗೊತ್ತುಂಟು. ತಮ್ಮ ಕುಟುಂಬದ ವೈದ್ಯರ ಸಲಹೆಯ ಮೇರೆಗೆ ಅವರು ‘ಡಾಲ್ಡಾ’ ಉಪಯೋಗ ಮಾಡುವದನ್ನು ಬಿಟ್ಟುಗೊಟ್ಟರು. ಆ ಕುಟುಂಬದಲ್ಲಿಯ ರೋಗಗ್ರಸ್ತ ಜನರು ಸಾವಕಾಶವಾಗಿ ಗುಣ ಹೊಂದಿ ಈಗ ಅವರು ನಿರೋಗಿಗಳಾಗಿರುವರು. ವನಸ್ಪತಿಯನ್ನು ಉತ್ಪಾದಿಸಲು ಇತ್ತೀಚೆ ಅನೇಕ ಕಂಪನಿಗಳು ಹೊರಟಿವೆ; ಈ ಕಂಪನಿಗಳು ಪ್ರತ್ಯಕ್ಷವಾಗಿ ಉತ್ಪಾದನೆಯನ್ನು ಪ್ರಾರಂಭಿಸಿದ ಕೂಡಲೆ ಪೇಟೆಯಲ್ಲಿ ವನಸ್ಪತಿಯ ಪೂರೈಕೆ ಹೆಚ್ಚಿ ಎಣ್ಣೆಯ ಕೊರತೆಯಾಗುವದು. ಈ ವಿಷಯದತ್ತ ಕೇಂದ್ರ ಸರಕಾರದ ಆಹಾರ ಖಾತೆಯವರು ಗಂಭೀರ ಮತ್ತು ತೀವ್ರ ಲಕ್ಷ್ಯವನ್ನು ಪೂರಯಿಸುವದು ಅವಶ್ಯವಾಗಿದೆಂದು ನಿಮಗನಿಸುವದಿಲ್ಲವೆ? ಹೊಸದಾಗಿ ಸ್ಥಾಪಿತವಾದ ಕಂಪನಿಗಳು ಯುರೋಪಿನಿಂದ ಯಂತ್ರಗಳಿಗಾಗಿ ಬೇಡಿಕೆ ಮಾಡುವವರಿದ್ದುದರಿಂದ ಇದು ಅತ್ಯವಸರದ ಪ್ರಶ್ನೆಯಾಗಿದೆ.

— ಜೆ. ಸಿ. ಕುಮಾರಪ್ಪ

## ವಾರದ ಪತ್ರ

(೯ ನೇ ಪುಟದಿಂದ ಮುಂದುವರಿದುದು)

ಎಂದೆಂದೂ ಶಾಂತಿಯ ಪುಣ್ಯಫಲವನ್ನು ಕೊಡಲು ಸಮರ್ಥರಾಗಿಲ್ಲವೆಂದು ಮನಗಾಣಬೇಕು. ಲಾರ್ಡ ಇರ್ವಿನ್ನರು ( ಈಗ ಲಾರ್ಡ ಹ್ಯಾಲಿಫಾಕ್ಸರು ) ಮರೆಯಲಾರದ ಒಂದು ಸಂದರ್ಭದಲ್ಲಿ ಹಿಂದೆ ಹೇಳಿರುವಂತೆ ‘ ಅದು ‘ಸ್ಮಶಾನ ಶಾಂತಿ ’ ಯಾಗಿತ್ತು. ”

### ಅಹಿಂಸಾ ಸೌರಭ

ಇನ್ನೊಂದು ಪ್ರಶ್ನೆ ಹೀಗಿತ್ತು: “ ನಿಮ್ಮ ಅಹಿಂಸೆಯ ದುರ್ಗಂಧದಿಂದ ನಿಮ್ಮ ಮೂಗಿಗೆ ಅಸಹ್ಯವೆನಿಸುವದಿಲ್ಲವೆ ? ” ಲಾಹೋರ, ಅಮೃತಸರ ಮೊದಲಾದ ಹಿಂದುಸ್ತಾನದ ನಗರಗಳಲ್ಲಿಯೂ ಬೇರೆ ಕಡೆಗಳಲ್ಲಿಯೂ ಇಂದು ಹಬ್ಬಿರುವ ಅತ್ಯಂತ ಹೇಡಿತನದ ಹಿಂಸೆಯ ದುರ್ಗಂಧದ ನಡುವೆ ಇಂದು ತಮ್ಮ ಅಹಿಂಸೆಯ ಸುಗಂಧ ಎಂದಿಗಿಂತಲೂ ಮಧುರವಾಗಿದೆಯೆಂದು ಗಾಂಧೀಜಿ ಮಾರುತ್ತರವಿತ್ತರು. ತಮ್ಮ ದೇಶಬಾಂಧವರ ಚರ್ಚೆಯಿಂದ ಅವರು ಹಿಂದುಗಳಿರಲಿ ಮುಸ್ಲಿಮರಿರಲಿ—ತಮಗೆ ಮುಖ ಎತ್ತದಂತಾಗಿದೆ. ಅವರಲ್ಲಿ ಯಾರು ತಮ್ಮನ್ನು ತನ್ನ ವೈರಿಯೆಂದು ಕರೆದರೂ ತಾವೇನು ಅವನ ವೈರಿಯಾಗುವಂತಿಲ್ಲ. “ಹಿಂದುಗಳನ್ನು, ಅದರಲ್ಲಿಯೂ ಸವರ್ಣ ಹಿಂದುಗಳನ್ನು ತಮ್ಮ “ವೈರಿ” ಗಳೆಂದು ಕರೆದು ಕಾಯದೆ—ಅಝುಮ ಜಿನ್ನಾ ಅವರು ಇಸ್ಲಾಮಿಗೆ ಅಪರಾಧವಮಾಡಿದ್ದಾರೆಂದು ನನಗೆ ಗೊತ್ತಿದೆ. ಸವರ್ಣ ಹಿಂದುಗಳು ಮಾತ್ರ ಜಿನ್ನಾರು ಕೊಟ್ಟ ಈ ಟೊಪ್ಪಿಗೆಯನ್ನು ಹಾಕಿಕೊಳ್ಳದೆ ಭಾರತ ಪ್ರೇಮಿಗಳಾದ ತಾವು ಎಲ್ಲ ಭಾರತೀಯರ ಗೆಳೆಯರೆಂದು ಸಿದ್ಧ ಮಾಡಿಕೊಡಲೆಂದು ಬಿನ್ನವಿಸುವೆ. ಉನ್ಮತ್ತತೆ ನಿರರ್ಥಕವಾಗುವ ದೊಡ್ಡ ಭಯವುಂಟು. ಪಾಕಿಸ್ತಾನ ಕೈಗೆ ಬಂದಿದೆ. ಅದು ತಮಗೆ ಲಭಿಸಿದರಿಂದ ಕಾಯದೆ ಅಝುಮರೇಕೆ ಸಂತುಷ್ಟರಾಗಬಾರದು ಅಥವಾ ಆ ವಿಷ ಈಗ ಕೈಹಿಡಿತಕ್ಕೆ ಬಾರದಷ್ಟು ಆಳವಾಗಿ ಹಬ್ಬಿ ಬಿಟ್ಟದೆಯೆ? ಅದೊಂದು ಅಣುಬಾಂಬಿನಂಥ ಅಥವಾ ಅದಕ್ಕೂ ಭಯಂಕರವಾದ ಆಯುಧವಾಗಿ ಬಿಟ್ಟದೆಯೋ? ಕಣ್ಣಿದ್ದವರೆಲ್ಲ ಅದನ್ನು ಕಂಡು ಈ ವಿಷಲತೆಯ ಬಿಗಿತದಲ್ಲಿ ಸಿಗುವ ಮೊದಲೇ ಹಿಂದುಸ್ತಾನವನ್ನು ಪಾರುಮಾಡಲಿ.”

### ಅಧಿಭೂತಾರಾಧನೆ

ಇಂದು ಜಗತ್ತನ್ನು ಆಕ್ರಮಿಸಿರುವ ರೋಗವನ್ನು, ಅಂದರೆ ಆಧ್ಯಾತ್ಮಿಕದ ಆರಾಧನೆಯ ಬದಲು ಅಧಿಭೌತಿಕ ಸಾಧನೆಯ ಹುಚ್ಚನ್ನು ಹೇಗೆ ತಡೆಯಬೇಕೆಂದು ಒಬ್ಬ ಪತ್ರಲೇಖಕ ಕೇಳಿದ್ದನು. ಹಿಂದುಸ್ತಾನವೇನು ಅದರಿಂದ ತೀರ ಮುಕ್ತವಾಗಿದೆಯೆನ್ನಬರುವದಿಲ್ಲೆಂದು ಗಾಂಧೀಜಿ ಉತ್ತರವಿತ್ತರು. “ನನ್ನ ಅಧ್ಯಾತ್ಮಿಕತೆಯ ಕಾರಣದಿಂದಲೇ ನನಗೀ ಪ್ರಶ್ನೆ ಹಾಕಲಾಗಿದೆ. ಅಧ್ಯಾತ್ಮಿಕಕ್ಕಿಂತ ಅಧಿಭೌತಿಕಕ್ಕೆ ಮಹತ್ವಕೊಡುವ ಈ ಒಳಸಂಚಿನಲ್ಲಿ ಹಿಂದುಸ್ತಾನದ ಅಂಗವಿದ್ದರೂ ಹಿಂದುಸ್ತಾನ ತನ್ನ ಸಂಸ್ಕೃತಿಯ ಗುಣವನ್ನೇ ಕೊನೆಗೆ ಆಶ್ರಯಿಸದಿರದೆಂದು ನನಗೆ ನಂಬಿಕೆಯುಂಟು.

### ಇಂಗ್ಲಂಡಿನೊಡನೆ ಗೆಳೆತನ

ಹಿಂದುಸ್ತಾನದ ರಾಜ್ಯಘಟನೆ ಸಿದ್ಧವಾಗಿ ಅದು ಸಾಮಂತ ರಾಜ್ಯಪದದಿಂದ ಸ್ವತಂತ್ರವಾದ ಬಳಿಕ ಇಂಗ್ಲಂಡಿನೊಡನೆ ಸ್ನೇಹದಿಂದಿರಬೇಕೆಂದಾಗಲಿ ಮತ್ತಾವದೇ ಸಂಬಂಧವಿಟ್ಟುಕೊಳ್ಳಬೇಕೆಂದಾಗಲಿ ಗಾಂಧೀಜಿ ಭಾವಿಸುತ್ತಾರೆಯೇ ಎಂದೊಬ್ಬ ಕೇಳಿದ್ದ.

ಇಂಗ್ಲಂಡಿನೊಡನೆ ಅತ್ಯಂತ ನಿಕಟ ಸಂಬಂಧವಿರಬೇಕೆಂದು ತಾವು ಬಗೆದಿರುವದಾಗಿ ಗಾಂಧೀಜಿ ಉತ್ತರವಿತ್ತರು. ಅದುದರಿಂದಲೇ ಈ ಸಂಧಿಕಾಲದಲ್ಲಿ ವಾಯಿಸರಾಯರಾಗಲಿ ಅವರ ಬ್ರಿಟಿಶ ಸಲಹೆಗಾರರಾಗಲಿ ಹಿಂದುಸ್ತಾನದಲ್ಲಿರುವ ಇತರ ಆಂಗ್ಲರಾಗಲಿ ಪೂರ್ಣ ಉಚಿತವಾದುದಲ್ಲದುದೇನನ್ನೂ ಮಾಡಬಾರದೆಂದು ನಾನು ಹಾರೈಸುವೆ. ಹಿಂದುಸ್ತಾನದೊಡನೆ ಒಟ್ಟಿಗೆ ಉಚಿತವಾಗಿ ನಡೆದುಕೊಂಡರೆ ಕಹಿಯಾದ ನೆನಹುಗಳು ಉಳಿಯಲಾರವು.

ಹೊಸದಿಲ್ಲಿ ಸುಶೀಲಾ ನಯ್ಯರ
೨೯—೬—೪೭

# ಕರ್ನಾಟಕ

## ಧಾರವಾಡ

ಧಾರವಾಡ ಜಿಲ್ಹೆಯಲ್ಲಿ ನೂಲು ಒಯ್ಯುವ ಬಗ್ಗೆ ಕೆಲ ಅಧಿಕಾರಿಗಳು ಅಡ್ಡಿ ಮಾಡುತ್ತಿರುವರೆಂದು ತಕರಾರು ಬಂದುದನ್ನನುಲಕ್ಷಿಸಿ ಧಾರವಾಡ ಜಿಲ್ಹಾ ಮ್ಯಾಜಿಸ್ಟ್ರೇಟರು ಪ್ರಕಟನೆಯೊಂದನ್ನು ಹೊರಡಿಸಿ ಈ ರೀತಿ ಅಡ್ಡಿ ಮಾಡುವ ಅಧಿಕಾರ ಅಧಿಕಾರಿಗಳಿಗೆ ಇಲ್ಲೆಂದೂ ಇಡೀ ಪ್ರಾಂತದಲ್ಲಿ ಬೇಕಾದಲ್ಲಿಗೆ ನೂಲನ್ನು ಒಯ್ಯಬಹುದೆಂದೂ ವಿಧಿಸಿದ್ದಾರೆ.

ಕಳೆದ ವರ್ಷ ಮೋಟರ ಕಲೆಯ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅಮೇರಿಕೆಗೆ ಹೋಗಿದ್ದ ಹುಬ್ಬಳ್ಳಿಯ ಎಸ್. ಪಿ. ಕೂಜಿಯವರು ಹುಬ್ಬಳ್ಳಿಗೆ ಮರಳಿದರು.

ಹುಬ್ಬಳ್ಳಿ ಮುನಿಸಿಪಾಲಿಟಿ ಹದ್ದನ್ನು ಹೆಚ್ಚಿಸಿದ್ದರಿಂದ ಹೊಸ ವಾರ್ಡ ಮುಂತಾದ್ದನ್ನು ಮಾಡಬೇಕಿದ್ದುದರಿಂದ ಇದೇ ಜೂನ ೩೦ ಕ್ಕೆ ಮುಗಿಯಲಿದ್ದ ಈಗಿನ ಬೋರ್ಡಿನ ಅವಧಿಯನ್ನು ೧೯೪೮ ಜೂನ ಕೊನೆ ವರೆಗೆ ಸರಕಾರದವರು ಬೆಳೆಸಿದ್ದಾರೆ.

ಮುಂಬಯಿ ಬಾಡಿಗೆ ಹಾಟೆಲ್ ಹಾಗು ಲಾಜಿಂಗ ಹೌಸುಗಳ ದರಗಳ ನಿಯಂತ್ರಣ ಕಾಯದೆಯ ೩ನೇ ಭಾಗವನ್ನು ಬೆಳಗಾವಿ ಗಜೇಂದ್ರಗಡ, ಅಣ್ಣೀಗೇರಿ, ಹಿರೇಕೆರೂರ ಹಾಗು ಶಿಗ್ಗಾವಿಗಳಿಗೆ ಅನ್ವಯಿಸಿರುವರು.

ಮುಂಡರಗಿಯ ಫೌಜದಾರರಾದ ಶ್ರೀ ಸಂಕೊಳ್ಳಿಯವರು ಮತ್ತು ಮೂವರು ಪೋಲೀಸರು ಹಾರೋಗೆರಿ ಲಂಚದ ಪ್ರಕರಣದಲ್ಲಿ ಸಸ್ಪೆಂಡ ಮಾಡಲ್ಪಟ್ಟಿರುವರು.

ಧಾರವಾಡ ನಗರದ ಕೆಲ ಭಾಗದಲ್ಲಿ ಪ್ಲೇಗ ಬೇನೆ ಪ್ರಾರಂಭವಾಗಿ ಒಂದೆರಡು ಮರಣಗಳು ಸಂಭವಿಸಿವೆ. ಪ್ಲೇಗ ಚುಚ್ಚುವ ಕಾರ್ಯ ಪ್ರಾರಂಭವಾಗಿದೆ.

ಗದುಗಿನಲ್ಲಿ ಭಂಗೀ ಜನರೂ ಕಸಗೂಡಿಸುವವರೂ ೨೫ ರಿಂದ ತಮ್ಮ ಕೆಲಸವನ್ನು ನಿಲ್ಲಿಸಿದ್ದರಿಂದ ಹೊಲಸು ಇದ್ದಲ್ಲಿಯೇ ಇದ್ದು ಊರಲ್ಲಿ ದುರ್ವಾಸನೆ ಪ್ರಾರಂಭವಾಗಿದೆ. ನಗರ ಸಭೆಯವರು ಕೂಡಲೆ ಈ ಬಗ್ಗೆ ವಿಚಾರ ಮಾಡಿ ಸಂಪು ನಿಲ್ಲುವಂತೆ ಮಾಡಬೇಕೆಂದು ತಾಲೂಕ ಕಾಂಗ್ರೆಸ ಸಮಿತಿಯವರು, ನಾಗರಿಕರು ನಗರಾಧ್ಯಕ್ಷರಿಗೆ ಬಿನ್ನವಿಸಿಕೊಂಡಿರುವರು.

ಗದುಗಿನ ಕುರಡಗಿ ಥೇಟರ ಕೂಟದಲ್ಲಿ ೨-೩ ತಿಂಗಳುಗಳಿಂದ ಒಂದೇಸವನೆ ಬಿಂಗೋ ಆಟ ೨ ಗಂಟೆಗಳ ವರೆಗೆ ನಡೆಯುತ್ತಲಿದೆ. ಕುಡುಕರು ಗೊಂದಲ ಹಾಕುತ್ತಾರೆ ಬುದ್ಧಿಕೌಶಲದ ಹೆಸರಿನಿಂದ ನಡೆದ ಆಟವಿದೆಂದು ಹೇಳಿ ಅಧಿಕಾರಿಗಳು ಅತ್ತ ದುರ್ಲಕ್ಷಿಸಹತ್ತಿದ್ದಾರೆ. ಪೋಲೀಸರು ಹಿಂದೆ ಒಂದು ದಿನ ಅಲ್ಲಿಗೆ ಹೋಗಿ ಕೆಲ ಜನರನ್ನು ಹಿಡಿದು ಹಣ ಮುಂತಾದ್ದನ್ನು ಜಪ್ತ ಮಾಡಿಕೊಂಡು ಹೋದರೂ ಈ ಆಟ ಯಥಾಪ್ರಕಾರ ಸಾಗಿದೆ.

ಹುಬ್ಬಳ್ಳಿಯ ಗಣೇಶ ವಿಲಾಸದಲ್ಲಿ ಕೆಲ ದಿನಗಳ ಹಿಂದೆ ಇಬ್ಬರು ಮಿತ್ರರಿಳಿದಾಗ ಅಬ್ದುಲ್ ಕರೀಮ ಪೀರ ಎಂಬವನು ತನ್ನ ಮಿತ್ರನ ಟ್ರಂಕಿನಲ್ಲಿದ್ದ ೭೦೦೦ ರೂಪಾಯಿಗಳನ್ನು ಎತ್ತಿಕೊಂಡು ಹೋಗುವ ಇಚ್ಛೆಯಿಂದ ಧಾರವಾಡಕ್ಕೆ ಪಲಾಯನ ಮಾಡಿದ್ದನು. ಅಲ್ಲಿ ಪೋಲೀಸರು ಅವನನ್ನು ಹಿಡಿದು ಖಟ್ಲೆ ಹಾಕಿದ್ದರು. ಆ ಖಟ್ಲೆಯ ವಿಚಾರಣೆ ನಡೆದು ಆರೋಪಿಗೆ ಒಂದು ವರ್ಷದ ಶಿಕ್ಷೆ ವಿಧಿಸಲಾಯಿತು.

ಕಳ್ಳ ಪೇಟೆಯಲ್ಲಿ ಅರಿವೆ ಮಾರಿ ಮುಂಬಯಿಗೆ ಕಳಿಸಲು ಪ್ರಯತ್ನಿಸಿದರೆಂದು ದಯಾರಾಮ ಮತ್ತು ಲಾಜ ಮುಲ್ತಾನಿ ಮುಂಬಯಿ ಅವರಿಗೆ ಹುಬ್ಬಳ್ಳಿಯ ಸಬ್ ಡಿವ್ಹಿಜನಲ್ ಮ್ಯಾಜಿಸ್ಟ್ರೇಟರು ೧ ತಿಂಗಳ ಕಠಿನ ಶಿಕ್ಷೆ ವಿಧಿಸಿದರು. ಹುಬ್ಬಳ್ಳಿ ಮುಸ್ಲಿಂ ಕೋಆಪರೇಟಿವ ಬ್ಯಾಂಕಿನ ಚೇಅರಮನ್ ಶ್ರೀ ಎಂ. ಎಂ. ಹನಸಿಯವರಿಗೆ ಮತ್ತು ನಿಜಾಮುದ್ದೀನ ರಾಜೇಸಾಹೇಬ ಚಿಕ್ಕೋಡಿ, ಮ್ಯಾನೇಜರ ಹುಬ್ಬಳ್ಳಿ ಮುಸ್ಲಿಂ ಕೋಆಪರೇಟಿವ್ ಬ್ಯಾಂಕ ಅವರಿಗೆ ೨ ಆರೋಪಗಳನ್ವಯ ಒಂದೊಂದು ತಿಂಗಳ ಸಾದಾ ಶಿಕ್ಷೆ ವಿಧಿಸಲಾಯಿತು. ಎರಡೂ ಶಿಕ್ಷೆಗಳನ್ನು ಅವರು ಒಮ್ಮೆಲೆ ಅನುಭವಿಸಬೇಕು. ಸುಮಾರು ೧೫೦೦೦ ರೂ. ಗಳ ಮಾಲನ್ನು ಸರಕಾರ ವಶಪಡಿಸಿಕೊಳ್ಳಲಾಯಿತು. ಇವರೆಲ್ಲ ಅಪೀಲ ಮಾಡುವವರಿದ್ದುದರಿಂದ ೧೦೦೦೦ ರೂ. ಜಾಮೀನ ಮೇಲೆ ಬಿಡಲ್ಪಟ್ಟಿರುವರು.

ನರೇಂದ್ರದಲ್ಲಿ ಶ್ರೀ ಸಣ್ಣಪ್ಪಾ ಉರ್ಫ ಕೇಶವರಾವ ಮುತಾಲಿಕ ದೇಸಾಯಿ ಎಂಬವರನ್ನು ಅಲ್ಲಿಯ ಮಹಾಂತಪ್ಪ ನಾಡಗೌಡ ಎಂಬುವನು ೨೦-೧೧-೪೬ ಕ್ಕೆ ಹೊಲದಲ್ಲಿ ಕುಡಗೋಲಿನಿಂದ ಗಾಯಗೊಳಿಸಿದ್ದರಿಂದ ಅವರು ಅಸ್ಪತ್ರೆಯಲ್ಲಿ ಮರಣಹೊಂದಿದರು ಈ ಬಗ್ಗೆ ಖಟ್ಲೆ ನಡೆದು ಸೆಶನ್ಸ ಜಜ್ಜರಾದ ಶ್ರೀ ಎಸ್. ಜಿ. ಶಾಣೀಕರರು ಗಲ್ಲಿನ ಶಿಕ್ಷೆಯನ್ನು ವಿಧಿಸಿದರು.

## ಬೆಳಗಾವಿ

೮-೮-೪೬ ಕ್ಕೆ ಮುರಗೋಡದಲ್ಲಿ ನೂರಂದಪ್ಪ ಸಣಕಲ್ಲ ಎಂಬವನ ಕೊಲೆ ಮಾಡಿದನೆಂದು ಈರಯ್ಯ ಪೂಜೇರಿ ಮೊದಲಾದ ಒಂಭತ್ತು ಜನರಿಗೆ ೨೦ ವರುಷ ಕರಿನೀರಿನ ಶಿಕ್ಷೆ ವಿಧಿಸಲಾಯಿತು. ಮೂವರು ಆರೋಪಿಗಳ ಬಿಡುಗಡೆಯಾಯಿತು.

ಈ ಸಲದ ಮುಂಬಯಿ ವಿಶ್ವವಿದ್ಯಾಲಯದ ಲಾ ಪರೀಕ್ಷೆಗಳಲ್ಲಿ ಬೆಳಗಾವಿಯ ರಾಜಾ ಲಖಮಗೌಡ ಲಾ ಕಾಲೇಜಿನ ಮೂವರು ವಿದ್ಯಾರ್ಥಿಗಳು ಮೊದಲನೆ ವರ್ಗದಲ್ಲಿ ತೇರ್ಗಡೆ ಹೊಂದಿದರು. ಪಾಸಾದ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಿಗಿದೆ.

ಇತ್ತೀಚೆ ನಡೆದ ಮುಂಬಯಿ ಶಾಸನ ಸಭೆಯ ಉಪಚುನಾವಣೆಯ ಕಾಲಕ್ಕೆ ಕಾಂಗ್ರೆಸ್ ಅಧಿಕೃತ ಹುರಿಯಾಳುವಿನ ವಿರುದ್ಧ ಪ್ರಚಾರ ಮಾಡಿ ಶಿಸ್ತುಭಂಗ ಮಾಡಿದರೆಂದು ಬಳವಂತರಾವ ಆಪಟೆ ಮಹಾದೇವಪ್ಪ ಮೆಂಡಗುದ್ಲಿ, ನಾರಾಯಣ ಹಣಮಂತ ವಾಳವೇಕರ, ಗುರುಲಿಂಗಪ್ಪ ಹಂಚಿನಮನಿ ಮತ್ತು ಆಡಿವೆಪ್ಪಾ ನಾವಲಗಟ್ಟಿ ಇವರು ೫ ವರ್ಷ ಕಾಂಗ್ರೆಸ್ ಹುರಿಯಾಳುಗಳಾಗಲಾರರೆಂದು ಬೆಳಗಾವಿ ಜಿಲ್ಹಾ ಕಾಂಗ್ರೆಸ್ ಕಾರ್ಯಸಮಿತಿಯವರು ವಿಧಿಸಿದ್ದಾರೆ.

ಅದರಂತೆ ಮಹಾಲಿಂಗಯ್ಯ ವಂಟಮೂರಿ ಮಠ, ಸಿ. ವಿ. ಘೋಡಗೇರಿ, ಪರಗೌಡ ಮಲಗೌಡ ಪಾಟೀಲ, ಅಪ್ಪಣ್ಣಾ ಸೊಲ್ಲಾಪುರ, ಮಲಗೌಡ ಪಾಟೀಲ ಇವರು ೩ ವರ್ಷ ಕಾಂಗ್ರೆಸ್ ಪ್ರಾಥಮಿಕ ಸದಸ್ಯರಾಗಲು ಅನರ್ಹರೆಂದು ವಿಧಿಸಲಾಗಿದೆ.

ಇದನ್ನು ವಿರೋಧಿಸಲು ವೀರಪ್ಪ ರೇಶ್ಮಿ, ರಾಯನಗೌಡ ಕಲ್ಲೂರ, ಸಿದ್ಧರಾಮಪ್ಪ ಹರಕುಣಿ ಮೊದಲಾದವರು ಕಾಂಗ್ರೆಸ್ ಸಮಿತಿಗಳಲ್ಲಿಯ ತಮ್ಮ ಸ್ಥಳಗಳಿಗೆಲ್ಲ ರಾಜೀನಾಮೆ ಕೊಟ್ಟಿರುವರೆಂದು ತಿಳಿಯುತ್ತದೆ.

ನಿಪ್ಪಾಣಿಯಿಂದ ೫ ಮೈಲುಗಳ ಮೇಲಿರುವ ಶಡೂರ ಎಂಬ ಹಳ್ಳಿಯಲ್ಲಿ ಸಕ್ತಿಯಿಂದ ಲೆವಿ ವಸೂಲ ಮಾಡುವದು, ಕಬುಲಾಯಿತಿ ಬರೆಸಿಕೊಳ್ಳುವದು ಮತ್ತು ರೊಕ್ಕ ಸೆಳೆದುಕೊಳ್ಳುವದು ಮೊದಲಾದ್ದನ್ನು ನಡೆಸಿದರೆಂಬ ಆರೋಪಕ್ಕಾಗಿ ೧೨ ಜನರನ್ನು ಸೆರೆಹಿಡಿಯಲಾಗಿದೆ. ಕುಟಾಳಿ ಎಂಬಲ್ಲಿ ಇಂಥ ೫ ಜನರನ್ನು ಹಿಡಿಯಲಾಗಿದೆ. ಈ ಭಾಗದಲ್ಲಿ ಸುಮಾರು ೧೦೦ ಜನ ಈ ಬಗೆಯ ಪುಂಡಾಟಿಕೆ ನಡೆಸಿರುವರೆಂದು ಹೇಳಲಾಗುತಿದ್ದು ಈಗ ಕೇವಲ ೩೨ ಜನರ ಹೆಸರು ಪೋಲಿಸರಿಗೆ ದೊರೆತಿದೆ.

## ಉತ್ತರ ಕನ್ನಡ

ಕಾರವಾರದಲ್ಲಿ ಪ್ಲೇಗಬೇನೆ ಇನ್ನೂ ಊರ್ಜಿತಾವಸ್ಥೆಯಲ್ಲಿದೆ. ಕಡ್ಡಾಯವಾಗಿ ಪ್ಲೇಗ ತೆಗೆಯುವ ಕಾರ್ಯ ಈಗಿನಿಂದಲೆ ನಡೆದಿದ್ದು ೬೫೦೦ ಜನರಿಗೆ ಪ್ಲೇಗ ತೆಗೆಯಲಾಗಿದೆ. ಬೇನೆ ಪ್ರಾರಂಭವಾದಂದಿನಿಂದ ೭೨ ಜನರಿಗೆ ಪ್ಲೇಗ ಎದ್ದು ೬ ಜನ ಮರಣ ಹೊಂದಿದ್ದಾರೆ. ಕಳೆದ ೧೫ ದಿನಗಳಲ್ಲಿ ೧೬ ಜನರಿಗೆ ಪ್ಲೇಗ ಎದ್ದು ೩ ಜನ ಮರಣಹೊಂದಿದರು.

ಅಂಕೋಲೆ ತಾಲೂಕಿನ ದುರಗಪ್ಪಗೌಡನೆಂಬವನು ತಮ್ಮ ತಂದೆಯು ಜೀವನನಿರ್ವಾಹಕ್ಕೆ ಏನೂ ಕೊಡಲಿಲ್ಲೆಂದು ಸಿಟ್ಟಿನಿಂದ ಮಸಾಲೆ ಅರಿಯುವ ಕಲ್ಲಿನಿಂದ ಅವನನ್ನು ಹೊಡೆದು ಕೊಂದನೆಂಬ ಆರೋಪಕ್ಕಾಗಿ ಖಟ್ಲೆ ನಡೆದು ಸಂಶಯದ ಲಾಭ ಕೊಟ್ಟು ಸೆಶನ್ಸ ಜಜ್ಜರು ಅವನನ್ನು ಬಿಡುಗಡೆ ಮಾಡಿದರು.

ಉತ್ತರಕನ್ನಡ ಜಿಲ್ಹೆಯ ಮಾಮಲೇದಾರರು ಹೊರಡಿಸಿದ ಬೆಳೆಯ ಪತ್ರಿಕೆಗಳು ಅಧಿಕೃತವಾಗಿಲ್ಲ, ಪ್ರಾಂತಸಾಹೇಬರಿಗಿಂತ ಕೆಳಗಿನ ವರ್ಗದ ಅಧಿಕಾರಿಗಳಿಗೆ ಈ ಅಧಿಕಾರ ಕೊಡಲು ಬರುವದಿಲ್ಲ. ಅದುದರಿಂದ ಈಗ ಹೊರಟ ಬೆಳೆಯ ಪ್ರಕಟನೆಗಳನ್ನು ರದ್ದುಪಡಿಸಿ ಒಡೆಯ ಒಕ್ಕಲರೊಳಗೆ ಆದ ಕರಾರುಗಳನ್ವಯ ಗೇಣಿ ಕೊಡಿಸುವದು ಉಚಿತವೆಂದು ಮುಂತಾಗಿ ಹೊನ್ನಾವರ ತಾಲೂಕ ಭೂಮಾಲಕರ ಸಂಘದ ಅಧ್ಯಕ್ಷರು ಜಿಲ್ಹಾಧಿಕಾರಿಗಳಿಗೆ ತಿಳಿಸಿದ್ದಾರೆಂದು ತಿಳಿಯುತ್ತದೆ.

ಮುಳಲಿ ಗ್ರಾಮದಲ್ಲಿ ಹೋಸ್ಪಣ್ಣಾ ಶಿವಪ್ಪಾ ಹೋಸಣ್ಣವರ ಇವನು ತನ್ನ ಹೆಂಡತಿ ಶಿವಕ್ಕ ಅವಳನ್ನು ಕೊಂದನೆಂದು ನಡೆದ ಖಟ್ಲೆಯಲ್ಲಿ ಆರೋಪಿಗೆ ಕರಿನೀರಿನ ಶಿಕ್ಷೆ ವಿಧಿಸಲಾಯಿತು.

## ವಿಜಾಪುರ

ವಿಜಾಪುರ ನಗರಸಭೆಯ ಹದ್ದಿಯಲ್ಲಿ ಇಬ್ರಾಹಿಮಪುರವನ್ನು ಸೇರಿಸಿದ್ದರಿಂದ ಹೊಸ ವಾರ್ಡ ಮುಂತಾದ್ದನ್ನು ಮಾಡಬೇಕಾದ್ದರಿಂದ ಇದೇ ಜೂನ ೩೦ ಕ್ಕೆ ಮುಗಿಯಲಿದ್ದ ಬೋರ್ಡಿನ ಅವಧಿಯನ್ನು ೧೯೪೭ ನೇ ಡಿಶೆಂಬರ ಕೊನೆಯವರೆಗೆ ಸರಕಾರದವರು ಬೆಳೆಸಿದ್ದಾರೆ.

ಬಾಗಲಕೋಟೆಯ ಶ್ರೀನಿವಾಸ ಪಾಂಡುರಂಗ ಕುಲಕರ್ಣಿಯವರು ಹೊರಡಿಸಿದ ಗಜಾನನ ಮೇಳಿಯ ಪದಗಳು ಎಂಬ ಪುಸ್ತಕದ ಮೇಲಿನ ನಿರ್ಬಂಧವನ್ನು ಸರಕಾರದವರು ತೆಗೆದುಹಾಕಿದ್ದಾರೆ.

ಹುಬ್ಬಳ್ಳಿ ಲ್ಯಾಮಿಂಗ್ಟನ್ ಹಾಯಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ಶ್ರೀ ವ್ಹಿ. ಆರ್. ಉಮ್ರೀಕರಯವರನ್ನು ಸರಕಾರಿ ನವಕರಿಯಲ್ಲಿ ತೆಗೆದುಕೊಂಡು ವಿಜಾಪುರದ ಅ. ಡೆ. ಎ. ಇ. ರನ್ನಾಗಿ ನೇಮಿಸಲಾಗಿದೆ. ಇವರು ಎಂ. ಎ. ಬಿ. ಟಿ. ಡಿ. ಪಿ. ಈಡಿ. ಇದ್ದು ವಿಶ್ವವಿದ್ಯಾಲಯದ ವಿದ್ಯಾರ್ಥಿವೇತನ ಪಡೆದು ಪಿಎಚ್ ಡಿ. ಯ ಅಭ್ಯಾಸವನ್ನು ಮಾಡಿರುವರು. ಇವರಂತೆ ಇನ್ನೂ ೭ ಜನರನ್ನು ಖಾಸಗಿ ಹಾಯಸ್ಕೂಲುಗಳೊಳಗಿಂದ ಸರಕಾರೀ ನವಕರಿಗೆ ತೆಗೆದುಕೊಳ್ಳಲಾಗಿದೆ.

ಇಲಕಲ್ಲಿನಲ್ಲಿ ಲೈಸನ್ಸಇಲ್ಲದೆ ಇದ್ದ ಕೈಮಗ್ಗದ ಅರಿವೆಯ ೧೦ ಅಂಗಡಿಗಳನ್ನು ಪೂರೈಕೆ ಪೋಲೀಸ ಇನಸ್ಪೆಕ್ಟರರು ೩ ದಿನಗಳ ಹಿಂದೆ ಮುಚ್ಚಿ ಮೊಹರು ಮಾಡಿರುವರು. ಲಾಯಸೆನ್ಸ ಅರ್ಜಿಗಳು ಜಿಲ್ಹಾಧಿಪರಿಂದ ನಿರಾಕರಿಸಲ್ಪಟ್ಟಿವೆ.

## ಬಳ್ಳಾರಿ

ಇಪ್ಪತ್ತೇಳು ಪ್ರಮುಖರ ಅಂಕಿತದಿಂದ ಇಂಗ್ಲಿಷ ಕನ್ನಡ ತೆಲಗು ಭಾಷೆಗಳಲ್ಲಿ ವಿಜ್ಞಾಪನ ಪತ್ರಿಕೆಯೊಂದು ಬಳ್ಳಾರಿಯಲ್ಲಿ ಹೊರಬಿದ್ದಿದೆ. ಕಲೆ ವಿಜ್ಞಾನ ಮತ್ತು ಪರಿಶ್ರಮದ ಶಿಕ್ಷಣ ಕೊಡುವಂಥ ರಾಯಲ್ ಸೀಮಾ ಕಾಲೇಜನ್ನು ಬಳ್ಳಾರಿಯಲ್ಲಿ ತೆರೆಯಲು ೨೫ ಲಕ್ಷ ರೂಪಾಯಿ ಕೂಡಿಸಲು ಸಹಾಯ ಮಾಡಬೇಕೆಂದು ಇದರಲ್ಲಿ ಬಿನ್ನವಿಸಲಾಗಿದೆ. ಬಳ್ಳಾರಿಯ ಮುನಿಸಿಪಲ್ ಹಾಯಸ್ಕೂಲ ಮುಖ್ಯ ಉಪಾಧ್ಯಾಯರಾದ ಕೆ. ಎಸ್. ವೇದಾಂತರವರು ಇದರ ಚಾಲಕರು.

## ದೇಶೀ ಸಂಸ್ಥಾನ

ಕೋಲಾರ ಜಿಲ್ಹಾ ತಕಾಪುರದ ಶ್ರೀ ದೇಶೀ ಗ್ರಂಥಾಲಯ ಮತ್ತು ಉಚಿತ ವಾಚನಾಲಯದ ಸಭೆ ಸೇರಿ ಶ್ರೀ ಎಸ್. ಗೋ[illegible]ರು ಅಧ್ಯಕ್ಷರಾಗಿಯೂ ಅರ್ ಶ್ರೀನಿವಾಸ ಮತ್ತು ಸಿ. ಪಿ. ಬುಟ್ಟಯ್ಯ ಶೆಟ್ಟಿಯವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು.

ಜಮಖಂಡಿಯ ಶ್ರೀ ಸಾಬಣೆಯವರ ಕೊಲೆಗಡಕರನ್ನು ಶೋಧಿಸಲು ನೇಮಿಸಲ್ಪಟ್ಟ ವಿಶೇಷ ಪೋಲೀಸ ಅಧಿಕಾರಿಗಳು ಇನ್ನೂ ಬಂದಿಲ್ಲ; ಕಾರ್ಯ ಪ್ರಾರಂಭಿಸಿಲ್ಲ. ಕೊಲ್ಹಾಪುರ ರೆಸಿಡೆನ್ಸಿಯ ಪೋಲೀಸ ಸಲಹೆಗಾರ ಶ್ರೀ ಜೋಶಿಯವರು ಜಮಖಂಡಿಗೆ ಹೋಗಿ ಎಲ್ಲವನ್ನೂ ಪರೀಕ್ಷಿಸಿಕೊಂಡು ಹೋದರು. ನಾಗರಿಕರ ನಿಷ್ಟವಮಂಡಳದವರು ಅವರನ್ನು ಕಂಡು ಪೋಲೀಸ ಅಧಿಕಾರಿಗಳಲ್ಲಿ ತೀವ್ರ ಬದಲಾವಣೆಯಾಗುವದು ಅವಶ್ಯವಾಗಿದೆಂದು ತಿಳಿಸಿದರು.

ಹೈದರಾಬಾದ ಸಂಸ್ಥಾನ ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟಿದ್ದ ಶ್ರೀ ಜಿ. ರಾಮಾಚಾರ್ಯರು ಮತ್ತು ಕಾಶೀನಾಥರಾವ ವೈದ್ಯರು ರಾಮಾನಂದ ಸ್ವಾಮೀಜಿಯವರ ಹೇಳಿಕೆಯ ಮೇರೆಗೆ ತಮ್ಮ ರಾಜೀನಾಮೆಯನ್ನು ಹಿಂತೆಗೆದುಕೊಂಡಿರುವರೆಂದು ತಿಳಿಯುತ್ತದೆ.

ಮೈಸೂರು ಸಂಸ್ಥಾನದ ಸಾಲ್ಮನೆ ಸಂಗೀತ ಪರಿಷತ್ತು ದಾವಣಗೆರೆಯಲ್ಲಿ ಜುಲೈ ೨೦ ಕ್ಕೆ ನೆರೆಯುವದು. ೫ ದಿನ ಒಳ್ಳೆ ಆಕರ್ಷಕ ಕಾರ್ಯಕ್ರಮ ಇಡಲಾಗುವದು. ಗಾನ ವಿದ್ವಾನ್ ವೆಂಕಟಗಿರಿಯಪ್ಪನವರು ಅಧ್ಯಕ್ಷತೆ ವಹಿಸುವರು.

ರಾಮದುರ್ಗ ರಾಜೇಸಾಹೇಬರು ರಾಮದುರ್ಗ ಶಾಸನ ಸಭೆಯ ಸದಸ್ಯರಾದ ಪಿ. ಜಿ. ಜೋಗ ಹಾಗೂ ಎನ್. ಜಿ. ಗದಗರನ್ನು ಲೋಕನಿಯುಕ್ತ ಮಂತ್ರಿಗಳಾಗಿ ನೇಮಿಸಿದ್ದಾರೆ. ದಿವಾಣರಾದ ರಾ. ಬ. ಬಿ. ಕೆ. ಜೋಶಿಯವರನ್ನು ಮಂತ್ರಿಮಂಡಳದ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಶಾಸನ ಸಭೆ ಅಗಸ್ಟ ೪ ಕ್ಕೆ ಕೂಡುವದು.

ನ್ಯಾಯಮೂರ್ತಿ ಎನ್. ಎಸ್. ಲೋಕೂರರು ಕೊಲ್ಹಾಪುರ ಹಾಯಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ ಜುಲೈ ೧ ರಿಂದ ನೇಮಿಸಲ್ಪಟ್ಟಿದ್ದಾರೆ. ಅಂದಿನಿಂದಲೆ ಹಾಯಕೋರ್ಟ ಪ್ರಾರಂಭವಾಗುವದು. ಅವರು ದಕ್ಷಿಣ ಸಂಸ್ಥಾನಗಳ ಸಂಯುಕ್ತ ಹಾಯಕೋರ್ಟಿನ ಮುಖ್ಯ ನ್ಯಾಯಾಧೀಶರೆಂದೂ ಕೆಲಸ ಮಾಡುವರು.

# ನಾಲ್ಕು ಮಾತು — ರಂಗನಾಥ ದಿವಾಕರ

## ಕರ್ನಾಟಕ ಪ್ರಾಂತ

ಈಗ ನಡೆದಿರುವ ಘಟನಾತ್ಮಕ ಬದಲಾವಣೆಗಳಲ್ಲಿ ಭಾಷಾನುಗುಣ ಪ್ರಾಂತ ರಚನೆಯಾಗುವದೆಂದು ಗ್ರಹಿಸುವ. ಇನ್ನೂ ಅನೇಕ ಅಡಚಣೆಗಳಿವೆ. ಅದುದರಿಂದಲೆ 'ಗ್ರಹಿಸುವ' ಎಂಬ ಶಬ್ದ ಪ್ರಯೋಗವನ್ನು ನಾನು ಮಾಡಿದುದು. ಹಾಗೆ ಪ್ರಾಂತಗಳ ಪುನರ್ರಚನೆಯಾಗುವಷ್ಟರಲ್ಲಿ ಮೈಸೂರು ಪೂರ್ಣ ಜವಾಬದಾರ ರಾಜ್ಯಪದ್ಧತಿಯನ್ನು ಸ್ಥಾಪಿಸಿದ್ದಾದರೆ ಬೆಳ್ಳಿಗಿಂತ ಬೆಳ್ಳಗೆ ಆಗುವದು, ಹಾಲಲ್ಲಿ ಸಕ್ಕರೆ ಹಾಕಿದಂತಾಗುವದು. ಕರ್ನಾಟಕ ಪ್ರಾಂತೀಕರಣದ ಸಮಸ್ಯೆ 'ಸುಲಿದ ಬಾಳೆಯ ಹಣ್ಣಿನಂದದಿ' ಸುಲಭತಮವಾಗುವದು. ಆದರೆ ಈಗ ಯಾವ ಮಂದಗತಿಯಿಂದ ಮೈಸೂರು ಸಾಗಿದೆಯೋ ಅದನ್ನು ನೋಡಿದರೆ ಆಶೆ ಕಾಣುವದಿಲ್ಲ. ಅಲ್ಲಿ ನಡೆದ ಆಂದೋಲನವು ಕೂಡ ಸದ್ಯಕ್ಕೆ ಅಲ್ಲಿಯ ಸರಕಾರವನ್ನು ಒತ್ತಾಯಪಡಿಸುವಷ್ಟು ಬಲಿಷ್ಠ ತೋರುವದಿಲ್ಲ. ಆ ಮೂಲಕ ಕರ್ನಾಟಕ ಪ್ರಾಂತೀಕರಣದ ಸಮಸ್ಯೆ ಬಿಡಿಸಲು ಎಷ್ಟು ಅನುಕೂಲತೆ ಇರಬಹುದಾಗಿತ್ತೊ ಅಷ್ಟು ಇಲ್ಲ. ಮೇಲಾಗಿ ಈ ಪರಿಸ್ಥಿತಿಯ ಮೂಲಕ ಕೈಗೆ ಬಂದುದು ಬಾಯಿಗೆ ಬೀಳಲೊಲ್ಲದಲ್ಲ, ತೊಡೆಯಲ್ಲಿದ್ದುದು ಎಡೆಯಲ್ಲಿಲ್ಲವಲ್ಲ ಎನಿಸುವದು. ಅದರೇನು, ಆ ವಿಚಾರ ಸದ್ಯಕ್ಕೆ ಬಿಟ್ಟೇ ಮುಂದೆ ಸಾಗಲಿಕ್ಕೆ ಬೇಕು.

× × ×

ಆಂಧ್ರ ಪ್ರಾಂತೀಕರಣವು ಎಲ್ಲಕ್ಕೂ ಸುಲಭವಿರುವದು. ಯಾಕೆಂದರೆ ಸುಮಾರು ೧೨ ಜಿಲ್ಲೆಗಳು ಒಂದೇ ಮದ್ರಾಸ ಪ್ರಾಂತಕ್ಕೆ ಸೇರಿದ್ದರಿಂದ ಪ್ರತ್ಯೇಕ ಪ್ರಾಂತವಾಗಬೇಕೆನ್ನುವದೊಂದೇ ಪುರಸತ್ತಿಗೆ ಅದು ಆಗೇ ಬಿಡುವದು. ಅದರಂತೆ ಮಹಾರಾಷ್ಟ್ರದಲ್ಲಿ ಕೂಡ (ಮಧ್ಯಪ್ರಾಂತದಲ್ಲಿರುವ ಮಹಾರಾಷ್ಟ್ರ ಸದ್ಯಕ್ಕೆ ಬಿಟ್ಟರೂ) ಹತ್ತು ಜಿಲ್ಲೆಗಳು ಒಂದೇ ಮುಂಬೈ ಪ್ರಾಂತದಲ್ಲಿರುವವು. ಮಹಾರಾಷ್ಟ್ರಕ್ಕೆ ಒಂದು ಅಡಚಣೆ ಮಾತ್ರ ಇದೆ. ಅದಾವದೆಂದರೆ ಗುಜರಾಥಿಯವರು ಮುಂಬೈ ಸ್ವತಂತ್ರ ಪ್ರಾಂತವಿರಬೇಕೆಂದು ಪ್ರಯತ್ನಪಟ್ಟೇತೀರುವರು. ಅದರಲ್ಲಿ ಅವರು ಯಶಸ್ವಿಯಾಗಲಿ ಬಿಡಲಿ ಅದೊಂದು ತಿಕ್ಕಾಟ ಕಟ್ಟಿಟ್ಟದ್ದು. ಇನ್ನು ಕರ್ನಾಟಕದ ಪಾಲಿಗೆ ಸಾವತ್ರ ಅನೇಕ ಅಡಚಣೆಗಳು ಇವೆ. ಬ್ರಿಟಿಶ ಕರ್ನಾಟಕವು ಎರಡು ಬೇರೆ ಪ್ರಾಂತಗಳಲ್ಲಿ ಹಂಚಿ ನಿಂತಿದೆ. ಅರ್ಧಕ್ಕಿಂತ ಹೆಚ್ಚಿನ ಕರ್ನಾಟಕದ ಭಾಗವು ಸಂಸ್ಥಾನಗಳಲ್ಲಿ ಹಂಚಿ ಹೋಗಿದೆ. ಮೈಸೂರು ಸಂಸ್ಥಾನದ ಸುತ್ತ ಅಂಚಿನಲ್ಲೆಲ್ಲ ಕರ್ನಾಟಕದ ತುಂಡುಗಳನೇಕ ವಿಸ್ಖಲಿತವಾಗಿ ಬಿದ್ದಿವೆ. ಅವುಗಳನ್ನು ಸೇರಿಸಿಕೊಳ್ಳುವಾಗ ಆಡಳಿತದ ಅಡಚಣೆಗಳು ಮುಂದೆ ಬರುತ್ತವೆ ಈ ಪ್ರಾಂತ ಸಣ್ಣದಾಗುವದು ಎಂದು ಹೇಳುವವರೂ ಇದ್ದಾರೆ. ಅದುದರಿಂದ ಕಮೀಶನ್ ನೇಮಿಸಲ್ಪಟ್ಟಾಗ ಈ ಎಲ್ಲ ಪ್ರಶ್ನೆಗಳ ಪೂರ್ಣ ವಿಮರ್ಶೆ ಮಾಡಿ ಯಥಾಯೋಗ್ಯ ಉತ್ತರಗಳನ್ನು ಕೊಟ್ಟು ಎಲ್ಲರನ್ನು ಸಮಾಧಾನ ಪಡಿಸುವ ಹೊಣೆಯು ಕರ್ನಾಟಕದ ಮೇಲೆ ಇದೆ. ನಾವು ಸಾಕಷ್ಟು ಅಂಕಿಸಂಖ್ಯೆಗಳನ್ನು ಕೂಡಿಸಿರುವೆವೆಂದು ನಮ್ಮಷ್ಟಕ್ಕೆ ನಾವೇ ಸಮಾಧಾನ ಹಚ್ಚಿಕೊಂಡು ಉಪಯೋಗವಿಲ್ಲ. ಯಾಕೆಂದರೆ ಕರ್ನಾಟಕ ಪ್ರಾಂತೀಕರಣದ ಬಗ್ಗೆ ನಮ್ಮ ಮನವರಿಕೆಯಾಗುವದು ಬೇರೆ, ಒಂದು ತಜ್ಞ ಸಮಿತಿಯನ್ನು ಆಡಳಿತ, ಆರ್ಥಿಕ ಭದ್ರತೆ, ಮುಂತಾದ ಎಲ್ಲ ದೃಷ್ಟಿಯಿಂದ ಒಪ್ಪಿಸುವ ಪ್ರಶ್ನೆ ಬೇರೆ. ಅದಕ್ಕಾಗಿ ಕರ್ನಾಟಕವು ಶ್ರೀ. ಗುಂಡಪ್ಪನವರು, ಶ್ರೀ ದಿನಕರ ದೇಸಾಯಿಯವರು, ಮುಂತಾದ ಒಳ್ಳೆಯ ಅಭ್ಯಾಸಿಗಳ ಒಂದು ಮಂಡಲವನ್ನು ನೇಮಿಸಿ ಈಗಿನಿಂದಲೆ ಪ್ರಯತ್ನಪಟ್ಟು ಎಲ್ಲ ಸಾಧನ ಸಾಮಗ್ರಿಗಳನ್ನು ಮೋಹರಿಸಿಡುವದು ಸೂಕ್ತವಾಗುವದು.

## ಪಾಕಿಸ್ತಾನದ ಸಮಸ್ಯೆಗಳು

ಪಾಕಿಸ್ತಾನವು ಪ್ರತ್ಯಕ್ಷ ಅಸ್ತಿತ್ವದಲ್ಲಿ ಬಂದು ತನ್ನ ಸಂಸಾರವನ್ನು ಚನ್ನಾಗಿ ಸಾಗಿಸಿಕೊಂಡು ಹೋಗಲಣಿಯಾಗುವ ವರೆಗೆ ಅದಕ್ಕೆ ಅನೇಕ ಅಡಚಣೆಗಳು ಬರುವ ಲಕ್ಷಣಗಳು ಕಾಣುತ್ತಿವೆ. ಆರಂಭಕ್ಕೆಯೆ 'ಪ್ರಥಮ ಗ್ರಾಸೇ ಮಕ್ಷಿಕಾಪಾತಃ' ಎಂಬಂತೆ ಗಡಿನಾಡಿನ ಸಮಸ್ಯೆಯಂತೂ ತಲೆ ತಿನ್ನಲಾರಂಭಿಸಿದೆ, ಎರಡನೆಯ ಪ್ರಶ್ನೆಯೆಂದರೆ ಪೂರ್ವ ಬಂಗಾಲದ್ದು. ಪಾಕಿಸ್ತಾನ ಘಟನಾ ಸಮಿತಿಯಲ್ಲಿ ಒಟ್ಟು ೬೯ ಸಭಾಸದರು. ಅದರಲ್ಲಿ ೪೧ ಪೂರ್ವ ಬಂಗಾಲದವರು! ಆ ೪೧ ರಲ್ಲಿ ೧೨ ಜನ ಹಿಂದುಗಳು. ಬಂಗಾಲದವರು ಹಿಂದುಗಳೇ ಇರಲಿ ಮುಸಲ್ಮಾನರೆ ಇರಲಿ. ಅವರು ಇತರರಿಗಿಂತ ಹೆಚ್ಚು ಪ್ರಾಂತಾಭಿಮಾನಿಗಳು. ಅದುದರಿಂದ ಸಿಂಧ ಪಂಜಾಬ, ಗಡಿನಾಡು, ಈ ಪ್ರಾಂತಗಳ ೨೮ ಸಭಾಸದರೊಟ್ಟಿಗೆ ಹಾಗೂ ಈ ೪೧ ಸಭಾಸದರೊಟ್ಟಿಗೆ ಆದರೆ ಯಾವಾಗಲೂ ಪೂರ್ವ ಬಂಗಾಲದವರೇ ಪ್ರಬಲರಾಗಿ ಬಿಡುವರು. ಇಡೀ ಪಾಕಿಸ್ತಾನದ ರಾಜಕಾರಣವು ಪೂರ್ವ ಬಂಗಾಲದ ಸೂತ್ರದಿಂದಲೆ ನಡೆಯುದೇಕಾಗುವದು. ಇದು ಪಾಕಿಸ್ತಾನಿಗಳಿಗೆ ಅಷ್ಟೊಂದು ರುಚಿಸುವದಿಲ್ಲವೆಂಬುದು ಸ್ಪಷ್ಟವಿದೆ.

ಮೂರನೆಯ ಅಡಚಣೆಯೆಂದರೆ ಯೋಗ್ಯ ಜನರ ಅಭಾವ. ಹಿಂದುಸ್ತಾನದಲ್ಲಿರುವ ಎಲ್ಲ ಮುಸಲ್ಮಾನ ನೋಕರ ವರ್ಗದವರಿಗೆ ಈಗ ಪಾಕಿಸ್ತಾನಕ್ಕೆ ಹೋಗಲು ನೀವು ಸಿದ್ಧರೋ ಎಂದು ಕೇಳಲಾಗಿದೆ. ಆದರೆ ಅನೇಕರು ಹೋಗಲು ಸಿದ್ಧರಿಲ್ಲ! ಹುಬ್ಬಳ್ಳಿಯಲ್ಲಿಯ ಒಂದು ಒಂದೂವರೆ ಸಾವಿರ ರೇಲ್ವೆ ವರ್ಕಶಾಪಿನಲ್ಲಿರುವ ಮುಸಲ್ಮಾನರಲ್ಲಿ ಕೇವಲ ಬೆರಳೆಣಿಸಲು ಬರುವವರಷ್ಟೇ ಪಾಕಿಸ್ತಾನಕ್ಕೆ ತೆರಳಲು ಸಿದ್ಧರಾಗಿರುವರು. ಇದೇ ರೀತಿ ವಿಮಾನ ಪಡೆಯ ಬಗ್ಗೆ ವಿಚಾರಿಸಿದರೆ ನೂರರಲ್ಲಿ ನಾಲ್ವರು ಮಾತ್ರ ವಿಮಾನಪಟುಗಳು ಮುಸಲ್ಮಾನರಿರುವರು. ಅವರು ನಾಲ್ಕು ಜನರು ಹೋದರೂ ಪಾಕಿಸ್ತಾನಕ್ಕೆ ಸಾಲದು. ಇದೇ ರೀತಿ ಎಲ್ಲ ವಿಷಯಗಳಲ್ಲಿಯೂ ತಜ್ಞರು, ನಿರ್ಮಾಪಕರು ಅವರಿಗೆ ತೀರ ಸ್ವಲ್ಪ ಜನರು ಸಿಕ್ಕುವರು. ಅತ್ಯಂತ ಕೃತ್ರಿಮವಾದ ಒಂದು ಪದ್ಧತಿಯಿಂದ ಈ ಪಾಕಿಸ್ತಾನದ ರಚನೆ ನಡೆದಿರುವದರಿಂದ ಇವೆಲ್ಲ ಅಡಚಣೆಗಳು ಮುಂದೆ ಬರುತ್ತಿರುವವು. ಒಂದೇ ಒಂದು ಎಂಬ ಭಾವನೆಯಿಂದ, ಯೋಜನೆಯಿಂದ ರಚಿಸಲಾದ ಹಿಂದುಸ್ತಾನ ರಾಷ್ಟ್ರದ ಸಂಘಟನೆಯನ್ನು ಒಮ್ಮೆಲೆ ಜಾತೀಯ ಮೂಲಕವಾಗಿ ವಿಚ್ಛೇದಿಸುವದು ತೀರ ಒಂದು ಹುಚ್ಚುತನದ ಉಪಕ್ರಮ ಎಂಬಲ್ಲಿ ಸಂಶಯವಿಲ್ಲ. ಅದರೇನು?

## ಸಂಸ್ಥಾನಿಕರ ಒಕ್ಕೂಟ

ಒಕ್ಕೂಟದ ವಿಷಯದಲ್ಲಿ ಎಲ್ಲ ಸಂಸ್ಥಾನಿಕರಿಗಿಂತ ಮೊದಲು ಮುಂದಡಿಯಿಟ್ಟವರು ದಕ್ಷಿಣ ಸಂಸ್ಥಾನದವರು. ಆದರೆ ಪ್ರಥಮದಲ್ಲಿ ಅವರು ಪ್ರಜೆಗಳ ಹಿತಕ್ಕಿಂತ ಸಂಸ್ಥಾನಿಕರ ಹಿತವನ್ನೆ ಅನುಲಕ್ಷಿಸಿ ಕೂಟವನ್ನೇರ್ಪಡಿಸುವದರಲ್ಲಿದ್ದರು. ಆದರೆ ಲೋಕವಿರೋಧವನ್ನು ಕಂಡು ಮುಂದೆ ಹಾದಿಗೆ ಬಂದರು. ಈಗ ಅವರು ಒಪ್ಪಿಕೊಂಡಿರುವರೆಂದು ಹೇಳಲಾಗುತ್ತಿರುವ ಮಾತುಗಳನ್ನು ನೋಡಿದರೆ ಆ ಮಾತುಗಳನ್ನವಲಂಬಿಸಿದ ಒಕ್ಕೂಟವು ಲೋಕಹಿತವನ್ನೆ ಹೆಚ್ಚು ಸಾಧಿಸುವದೆಂಬಲ್ಲಿ ಸಂಶಯವು ಕಾಣುವದಿಲ್ಲ. ಆ ಮಾತುಗಳನ್ನು ನಿರ್ದೇಶಿಸಿ ಅ. ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಸ್ಥಾಯೀ ಸಮಿತಿಯವರು ಅವು ಯೋಗ್ಯವಿರುವವೆಂದು ನಿರ್ಣಯ ಮಾಡಿದ್ದಾರೆ. ಆದರೆ ಈಗ ಆ ಬಗ್ಗೆ ಇನ್ನೂ ಆಯಾ ಸಂಸ್ಥಾನೀ ಪ್ರಜೆಗಳ ಸಮ್ಮತಿ ದೊರೆತಿಲ್ಲ. ಆಯಾ ಪ್ರಜಾ ಸಂಘದವರು ಆ ಮಾತುಗಳನ್ನು ವಿಮರ್ಶಿಸಿ ಅವು ಯೋಗ್ಯವೆಂದು ಕಂಡರೆ ಸಮ್ಮತಿ ಕೊಡಲು ಅಡ್ಡಿ ಇಲ್ಲ. ಅದರಲ್ಲಿಯ ಮುಖ್ಯ ಮಾತುಗಳೆಂದು ಜಾಹೀರಾದವುಗಳು ಹತ್ತು. ಆದರೆ ಅವುಗಳಲ್ಲಿ ಮಹತ್ವವೆಂದರೆ, ಎಲ್ಲ ಅಧಿಕಾರವು ಪ್ರಜೆಗಳಿಂದಲೆ ಪ್ರಾಪ್ತವಾದುದು, ಲೋಕಪ್ರತಿನಿಧಿಗಳಿಂದಲೆ ಕೂಡಿದ ಘಟನಾಸಮಿತಿ ಇರತಕ್ಕದ್ದು, ಸಂಸ್ಥಾನಿಕರ ವರ್ಷಾಶನ ಹಾಗೂ ಸ್ಥಾನಮಾನ ಇವುಗಳನ್ನು ಡಾ. ರಾಜೇಂದ್ರಪ್ರಸಾದ ಹಾಗೂ ಹಲವು ಪಂಚರೇ ನಿರ್ಣಯಿಸಬೇಕು. ಕನ್ನಡ ಮರಾಠಿ ಹೀಗೆ ಎರಡು ಪ್ರತ್ಯೇಕ ಆಡಳಿತ ಭಾಗಗಳನ್ನು ಮಾಡಿ ಕಾರಭಾರ ನಡೆಸತಕ್ಕದ್ದು, ಭೌಗೋಲಿಕ ಗಡಿಗಳನ್ನು ಅಳಿಸಿ ಬಿಡತಕ್ಕದ್ದು, ಕನ್ನಡಭಾಗ ಕರ್ನಾಟಕ ಪ್ರಾಂತಕ್ಕೆ, ಮರಾಠಿ ಭಾಗ ಮಹಾರಾಷ್ಟ್ರ ಪ್ರಾಂತಕ್ಕೆ ಸೇರಲಿಚ್ಛಿಸಿದರೆ ಹಾಗೆ ಮಾಡಲು ಅನುವುಗೊಡುವಂತೆ ಘಟನೆಯಲ್ಲಿ ವ್ಯವಸ್ಥೆ ಇರತಕ್ಕದ್ದು ಇತ್ಯಾದಿ. ಇವುಗಳನ್ನು ನೋಡಿದರೆ ಸತ್ತಾಂತರ ಹಾಗೂ ಕರ್ನಾಟಕ ಏಕೀಕರಣ ಇವುಗಳಿಗೆ ಈ ಮಾತುಗಳು ಅನುಕೂಲವೆ ಇರುವವು. ಆದರೆ ಈ ಮಾತುಗಳನ್ನು ಆಯಾ ಪ್ರಜಾ ಸಂಘಗಳು ವಿಮರ್ಶಿಸಿ ಮನವರಿಕೆ ಮಾಡಿಕೊಳ್ಳುವದು ಯೋಗ್ಯವು. ಈ ಯೋಜನೆಯಲ್ಲಿ ಸಂಶಯಸ್ಥಾನಗಳಾಗಲಿ ಭಯಸ್ಥಾನಗಳಾಗಲಿ ಇದ್ದರೆ ಅವುಗಳ ಬಗ್ಗೆ ಸ್ಪಷ್ಟೀಕರಣ ಮಾಡಿಸಿಕೊಳ್ಳುವದೂ ಅವಶ್ಯವು. ಆದರೆ ಅತ್ಯಂತ ದ್ರುತಗತಿಯಿಂದ ಸಾಗಿದ ಘಟನಾತ್ಮಕ ಅದಲುಬದಲುಗಳ ಕಾಲದಲ್ಲಿ ಸ್ವಸ್ಥ ಕಾಲಹರಣ ಮಾಡುವದರಿಂದ ಮಾತ್ರ ಲಾಭವಾಗಲಿಕ್ಕಿಲ್ಲ. ಪೂರ್ಣ ಸತ್ತಾಂತರ, ಪೂರ್ಣ ಹೊಣೆಗಾರ ರಾಜ್ಯಪದ್ಧತಿಯ ಸ್ಥಾಪನೆ ಹಾಗೂ ಕರ್ನಾಟಕ ಏಕೀಕರಣ ಈ ಮೂರು ಸಾಧಿಸುವವೊ ಇಲ್ಲವೊ ಇದನ್ನು ನೋಡಿ ನಾವು ಮುಂದೆ ಸಾಗಬೇಕು.

## ಗಡಿನಾಡಿನ ಗೊಂದಲ

ಪಾಕಿಸ್ತಾನವು ಸುಸೂತ್ರ ತಮ್ಮ ಗಂಟಲಲ್ಲಿಳಿಯಬಹುದೆಂದು ಜನಾಬ ಜಿನ್ನಾರವರು ಎಣಿಸಿದ್ದಾದರೆ ಹಾಗೆ ಆಗುವಂತೆ ಕಾಣಲಿಲ್ಲ. ಇಡೀ ಪಂಜಾಬ ಹಾಗೂ ಬಂಗಾಲ ಪಾಕಿಸ್ತಾನದಲ್ಲಿರಬೇಕೆಂದು ಅವರು ಹವಣಿಸಿದ್ದರು. ಹಾಗಂತೂ ಆಗಲಿಲ್ಲ. ಈಗ ಅಚ್ಚ ಮುಸಲ್ಮಾನ ಭಾಗವಾದ (ಅಲ್ಲಿ ಮುಸಲ್ಮಾನೇತರರು ನೂರಕ್ಕೆ ಎಂಟು ಮಾತ್ರ) ಗಡಿನಾಡು ಕೂಡ ಪಾಕಿಸ್ತಾನವನ್ನು ನಿರಾಕರಿಸುತ್ತಿರುವದು! ನಾವೊಂದು ಪಠಾಣಿಸ್ತಾನವನ್ನು ಕಟ್ಟಿಕೊಂಡಿರುವೆವೆಂದು ಖಾನ ಬಂಧುಗಳ ಹಟವು. ಈ 'ಸ್ಥಾನ'ಗಳ ಹುಚ್ಚು ತಲೆಯೊಳಗೆ ಹೊಕ್ಕಿತೆಂದರೆ ಜಾತೀಯ ಭೂತದಂತೆಯೇ ಅದು ಜನರನ್ನು ಹುಚ್ಚೆದ್ದು ಕುಣಿಸತೊಡಗುವದು. ಇನ್ನು ಸಿಂಧ ಪಂಜಾಬಗಳಾದರೂ ಏನು ಮಾಡುವವೊ ನೋಡಬೇಕು. ಆದರೆ ಗಡಿನಾಡಿನವರು ಪೂರ್ಣಸ್ವಾತಂತ್ರ್ಯ ಬೇಡುವದು ಯಾವದೇ ರೀತಿಯಿಂದ ಸಮರ್ಥನೀಯವಾಗಲಾರದು. ಅಂಥ ಬೇಡಿಕೆಯನ್ನು ಪ್ರೋತ್ಸಾಹಿಸುವದು ಹಿಂದುಸ್ತಾನದ ದೃಷ್ಟಿಯಿಂದಲೂ ಯೋಗ್ಯವಾಗಲರಿಯದು. ಯಾಕೆಂದರೆ ಗಡಿನಾಡು ಆ ರೀತಿ ಪೂರ್ಣ ಸ್ವಾತಂತ್ರ್ಯವನ್ನು ಬೇಡಿದರೆ ಹಿಂದುಸ್ತಾನದಲ್ಲಿಯ ಇತರ ಪ್ರಾಂತಗಳಾದರೂ ಏಕೆ ಸ್ವಾತಂತ್ರ್ಯವನ್ನು ಬೇಡಬಾರದು? ಪೂರ್ಣ ಸ್ವಾಯತ್ತತೆಯನ್ನು (ಆಟೋನಮಿ) ಬೇಡುವದು ಬೇರೆ, ಪೂರ್ಣ ಸ್ವಾತಂತ್ರ್ಯವನ್ನು (ಇನ್‌ಡಿಪೆಂಡನ್ಸ) ಬೇಡುವದು ಬೇರೆ. ತಮ್ಮ ಘಟನೆಯನ್ನು ತಾವೇ ಮಾಡಿಕೊಳ್ಳಲು, ಅಂತರಿಕ ಆಡಳಿತವನ್ನು ತಾವೇ ಸ್ವತಂತ್ರವಾಗಿ ಎರಡನೆಯವರ ಕೈವಾಡವಿಲ್ಲದೆ ನಡೆಸಲು ತಾವು ಸ್ವತಂತ್ರರಿರಬೇಕು ಎನ್ನುವದು ಸೂಕ್ತವಾಗಬಲ್ಲದು. ಆದರೆ ಸರ್ವತಂತ್ರಸ್ವತಂತ್ರರಾಗಿ ಸಂರಕ್ಷಣೆ, ಪರರಾಷ್ಟ್ರ ಸಂಬಂಧ ಮುಂತಾದ ವಿಷಯಗಳಲ್ಲಿಯೂ ತಾವು ತಮಗೆ ತಿಳಿದಂತೆ ನಡೆಕೊಳ್ಳುವವರು ಎಂದು ಗಡಿನಾಡಿನವರು ಅನ್ನುತ್ತಿದ್ದರೆ ಆ ಬೇಡಿಕೆಯನ್ನು ಪೋಷಿಸುವದು ಯೋಗ್ಯವೂ ಅಲ್ಲ ಹಾಗೂ ಜೂನ ೩ ರ ಯೋಜನೆಯನ್ನು ಒಪ್ಪಿದವರು ಹಾಗೆ ಮಾಡುವದು ವಚನವನ್ನು ಪಾಲಿಸಿದಂತೆಯೂ ಅಲ್ಲ. ಈಗಿನ ಮಟ್ಟಿಗೆ ಜನಮತಗಣನೆಯನ್ನಂತೂ ಬಹಿಷ್ಕರಿಸುವದನ್ನು ಖಾನ ಬಂಧುಗಳು ನಿಶ್ಚಯಿಸಿರುವರು. ಅದುದರಿಂದ ಪಾಕಿಸ್ತಾನ ಸೇರಲು ತಮ್ಮ ಒಪ್ಪಿಗೆ ಇಲ್ಲ ಎಂಬುದನ್ನಂತೂ ಅವರು ಸ್ಪಷ್ಟಗೊಳಿಸಿರುವರು. ಇದು ಜಿನ್ನಾರವರಿಗೆ ಸಾಕಷ್ಟು ತಲೆನೋವನ್ನುಂಟುಮಾಡಿದೆ. ಆದರೆ ಇನ್ನು ಮುಂದೆ ಮತ್ತೇನಾಗುವದು—ಇದು ನೋಡುವಂತಿದೆ.

### ಲೇಖಕರಿಗೆ ಸೂಚನೆ

"ಕರ್ಮವೀರ"ಕ್ಕೆ ಕಥೆ, ಕವಿತೆ, ಲೇಖನಗಳನ್ನು ಕಳುಹಿಸುವವರು ಅವು ಸ್ವೀಕೃತವೋ ಅಸ್ವೀಕೃತವೊ ಎಂಬುದನ್ನು ತಿಳಿಯಲಪೇಕ್ಷಿಯಿದ್ದರೆ ಆ ಲೇಖನಗಳ ಸಂಗಡಲೇ ಅದಕ್ಕೆ ಬೇಕಾಗುವ ಅಂಚೆ ಚೀಟಿಗಳನ್ನು ಅಥವಾ ತಮ್ಮ ವಿಳಾಸ ಬರೆದ ಕವರನ್ನು ಕಳಿಸತಕ್ಕದ್ದು. ಹೀಗೆ ಕಳಿಸದಿದ್ದ ಲೇಖನಗಳ ಬಗ್ಗೆ ಮುಂದೆ ಯಾವ ವಿಧದ ಪತ್ರವ್ಯವಹಾರವನ್ನೂ ಮಾಡಲಾಗುವುದಿಲ್ಲ. ಅಸ್ವೀಕೃತ ಲೇಖನಗಳನ್ನು ನಾವು ಕಾದಿಡುವುದಿಲ್ಲವಾದ್ದರಿಂದ ಅವನ್ನು ಅನಂತರ ತಿರುಗಿ ಕಳಿಸಲು ಅಥವಾ ಅವುಗಳ ಬಗ್ಗೆ ಯಾವುದೊಂದು ವಿವರವನ್ನು ತಿಳಿಸಲು ಅಸಾಧ್ಯವಾಗುವದೆಂಬುದನ್ನು ಲೇಖಕರು ಗಮನಿಸಬೇಕು. ಸಾಮಾನ್ಯವಾಗಿ ಲೇಖನಗಳು ೮ ವಾರಗಳೊಳಗೆ ಪ್ರಕಟವಾಗದಿದ್ದರೆ ಅವು ಅಸ್ವೀಕೃತವೆಂದು ತಿಳಿದುಕೊಳ್ಳಲು ಅಡ್ಡಿಯಿಲ್ಲ.

—ಸಂಪಾದಕ

## ವರ್ಹಾಡದಲ್ಲಿ ಶಸ್ತ್ರಾಸ್ತ್ರಗಳ ಕಳ್ಳ ಆಯಾತ

### ಗಡಿಗಳಲ್ಲಿ ಸಶಸ್ತ್ರ ಸೈನಿಕರ ಅವಶ್ಯಕತೆ

ಅಖಿಲ ಭಾರತ ಹಿಂದೂ ಮಹಾಸಭೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ವಿ. ಜಿ. ದೇಶಪಾಂಡೆಯವರು ವರ್ಹಾಡದಲ್ಲಿ ಶಸ್ತ್ರಾಸ್ತ್ರಗಳ ಕಳ್ಳ ಆಯಾತವು ದೊಡ್ಡ ಪ್ರಮಾಣದಲ್ಲಿ ನಡೆದಿರುವದೆಂದೂ ಅವುಗಳನ್ನು ಹಂಚಲು ಪಂಚಮ ದಲಗಳು ಸಂಘಟಿತವಾಗಿರುವುವೆಂದೂ ಅದರಿಂದ ಜನರು ಗಾಬರಿಯಾಗಿದ್ದಾರೆಂದೂ ತಿಳಿಸುತ್ತಾರೆ. ಅಲ್ಲದೆ ಕೇಂದ್ರ ಸರಕಾರದವರು ಗಡಿಗಳಲ್ಲಿ ಸಶಸ್ತ್ರ ಸೈನಿಕರನ್ನಿಟ್ಟು ಜನರಲ್ಲಿಯ ಈ ಹೆದರಿಕೆಯನ್ನು ಹೋಗಲಾಡಿಸಬೇಕೆಂದೂ ವರ್ಹಾಡವು ಹಿಂದೀ ಒಕ್ಕೂಟದ ಅಂಗವಾಗುವದೆಂದು ಕೂಡಲೆ ಸ್ಪಷ್ಟವಾಗಿ ಸಾರಬೇಕೆಂದೂ ವಿನಂತಿ ಮಾಡಿಕೊಂಡಿದ್ದಾರೆ.

# ಮೈಸೂರು ನ್ಯಾಯ ವಿಧಾಯಕ ಸಭೆಯ ಕಾರ್ಯಕಲಾಪಗಳು

## ಸರಕಾರದ ಹಣದ ಬೇಡಿಕೆಗಳು ಮಾನ್ಯವಾದವು

**ಮಂತ್ರಿಗಳ ಭಾಷಣ. ವಿಮಾನ ಕಾರಖಾನೆಯಿಂದ ಪಡೆದ ಲಾಭ. ಅನ್ನ ವಸ್ತ್ರಗಳ ವಿತರಣದ ಬಗ್ಗೆ ಸಮಾಧಾನ. ಸಂಸ್ಥಾನದಲ್ಲಿ ಕೈಕೊಳ್ಳಬೇಕೆಂದಿರುವ ಕೈಗಾರಿಕೆಯ ಯೋಜನೆಗಳು. ಈಸೂರು ಶ್ರವಣ ಬೆಳಗೊಳಗಳ ಬಂದಿಗಳ ಬಿಡುಗಡೆಯ ಪ್ರಶ್ನೆ. ಮರಣ ದಂಡನೆಯನ್ನು ತೆಗೆದು ಹಾಕಬೇಕೆಂಬ ಬೇಡಿಕೆ. ಹೊಣೆಗಾರ ಸರಕಾರದ ಬಗ್ಗೆ ಮತಪ್ರದರ್ಶನ ಮಾಡಲು ಕಾಂಗ್ರೆಸ್ಪಕ್ಷದವರ ಸಭಾತ್ಯಾಗ.**

ಜೂನ ೨೩ ರ ಸಂಜೆ ಸಭಾನಾಯಕರಾದ ವಿದ್ಯಾಮಂತ್ರಿ ಡಿ. ಬಿ., ಡಾ. ಟಿ. ಸಿ. ಎಂ. ರಾಯನ್ನರು ಟೀಕೆಗಳಿಗೆ ಉತ್ತರಕೊಡುತ್ತ ಕಾಂಗ್ರೆಸ್ ಪಕ್ಷದ ಸದಸ್ಯರು ದ್ವೇಷಾತ್ಮಕವಾದ ಟೀಕೆಗಳನ್ನು ಮಾಡದೆ ವೈಯಕ್ತಿಕವಾಗಿ ಕಂದಾಯಮಂತ್ರಿಗಳನ್ನು ಮತ್ತು ಇತರ ಅಧಿಕಾರಿಗಳನ್ನು ದೂಷಿಸಿದುದು ಅತ್ಯಂತ ವ್ಯಸನಕರವೆಂದು ಹೇಳಿದರು.

ಸಾರ್ವಜನಿಕ ಕಾಮಗಾರಿ ಮಂತ್ರಿಗಳಾದ ಶ್ರೀ ಎಲ್ ಸಿದ್ದಪ್ಪನವರು ತಮ್ಮ ಅಧಿಕಾರಕ್ಕೆ ಒಳಪಟ್ಟಿರುವ ಶಾಖೆಗಳಿಗೆ ಸಂಬಂಧಿಸಿದ ಟೀಕೆಗಳಿಗೆ ತಕ್ಕ ಉತ್ತರವನ್ನು ಕೊಟ್ಟು ಎಲ್ಲರ ಮೆಚ್ಚಿಗೆಯನ್ನು ಪಡೆದರು.

ಅನಂತರ ಪೂರೈಕೆ ಮಂತ್ರಿಗಳು ಬಟ್ಟೆ ಮತ್ತು ಆಹಾರ ಪದಾರ್ಥಗಳ ವಿತರಣವನ್ನು ಚೆನ್ನಾಗಿ ಮಾಡಿರುವುದಾಗಿ ಹೇಳಿದರು.

ಗೃಹಮಂತ್ರಿಗಳಾದ ರಾ. ಪ್ರ. ಎಂ ಶೇಷಾದ್ರಿಯವರು ಸಾರ್ವಜನಿಕ ಸೇವಕರು ತಮಗೆ ತಿಳಿದ ಅಂಶವನ್ನು ಸರ್ಕಾರದ ಗಮನಕ್ಕೆ ತರಬೇಕೆಂದೂ ಕೋಮುವಾರು ಗಲಭೆಯನ್ನು ಗುಂಡುಹಾರಿಸದೆ ಒಂದುವಾರದಲ್ಲಿ ತಹಬಂದಿಗೆ ತಂದುದು ಅಧಿಕಾರಿಗಳ ಅರ್ಹತೆಯನ್ನು ವ್ಯಕ್ತಪಡಿಸುವುದೆಂದೂ ಹೇಳಿದರು.

ಆದಾದ ಮೇಲೆ ಹಣಕಾಸಿನ ಕಾರ್ಯದರ್ಶಿಗಳಾದ ಶ್ರೀ ಎಂ ಬ್ಯಾಸಪ್ಪನವರು ಹಿಂದುಸ್ತಾನ ವಿಮಾನ ಕಾರಖಾನೆಗೆ ಸರಕಾರ ಕೊಟ್ಟ ೨೫ ಲಕ್ಷ ಬಂಡವಾಲಕ್ಕೆ ಪ್ರತಿಫಲವಾಗಿ ೧೨॥ ಲಕ್ಷ ರೂಪಾಯಿಗಳ ಲಾಭವಾಗಿದೆಯೆಂದು ಮುಂತಾಗಿ ಸದಸ್ಯರು ವ್ಯಕ್ತಪಡಿಸಿದ ಅನುಮಾನಗಳೆಲ್ಲಕ್ಕೂ ತಕ್ಕ ಉತ್ತರಕೊಟ್ಟರು.

ಜೂನ ೨೮ರಲ್ಲಿ ರಾ. ಮ. ಪ್ರ. ಬಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ನೆರೆದಾಗ ಕಂದಾಯಮಂತ್ರಿಗಳಾದ ಶ್ರೀ ಜೆ ಅಪ್ಪಾಜಿ ಗೌಡರು ಅರಣ್ಯ ಶಾಖೆಗೆ ಸಂಬಂಧಿಸಿದ ೮,೨೬,೮೦೦ ರೂಪಾಯಿಗಳ ಬೇಡಿಕೆಯನ್ನು ಸಭೆಯ ಮುಂದಿಟ್ಟರು. ಮೋಶಾಥಿರ್ಣಯ ಬಿದ್ದುಹೋಗಿ ಬೇಡಿಕೆ ಅಂಗೀಕೃತವಾಯಿತು.

ಜೂನ ೨೫ ರ ಸಭೆಯಲ್ಲಿ ಕಂದಾಯಮಂತ್ರಿಗಳ ಭೂಕಂದಾಯಕ್ಕೆ ಸಂಬಂಧಿಸಿದ ೩೩,೮೯,೦೦೦ ರೂಪಾಯಿಗಳ ಬೇಡಿಕೆಯು ಸ್ವೀಕೃತವಾಯಿತು.

ಬೆಂಗಳೂರು ಜಿಲ್ಲೆಯಲ್ಲಿ ೮, ಚಿತ್ರದುರ್ಗದಲ್ಲಿ ೪, ಶಿವಮೊಗ್ಗೆಯಲ್ಲಿ ೫, ತುಮಕೂರಿನಲ್ಲಿ ೩, ಮಂಡ್ಯದಲ್ಲಿ ೩, ಮೈಸೂರು ಜಿಲ್ಲೆಯಲ್ಲಿ ೪ ಮತ್ತು ಕೋಲಾರ ಜಿಲ್ಲೆಯಲ್ಲಿ ೨ ಗ್ರಾಮ ಕೈಗಾರಿಕೆಗಳ ಕೇಂದ್ರಗಳನ್ನು ಏರ್ಪಡಿಸಿರುವದಾಗಿ ಜೂನ ೨೭ ರಲ್ಲಿ ಸರಕಾರದ ಅಭಿವೃದ್ಧಿ ಶಾಖೆಯ ಕಾರ್ಯದರ್ಶಿಗಳು ಸದಸ್ಯರ ಪ್ರಶ್ನೆಗಳಿಗೆ ಉತ್ತರವಾಗಿ ಹೇಳಿದರು.

“ಗ್ರಾಮ ಕೈಗಾರಿಕೆಗಳ ವಿಚಾರದಲ್ಲಿ ಕ್ರಿಯಾತ್ಮಕ ಯೋಜನೆಯೊಂದನ್ನು ಸರಕಾರ ಪರಿಶೀಲಿಸುತ್ತಿದೆಯೆಂದೂ ಆ ಯೋಜನೆಯಲ್ಲಿ ೧೮ ಕೈಗಾರಿಕೆಗಳ ಏರ್ಪಾಡಿದೆಯೆಂದೂ ಉಪಪ್ರಶ್ನೆಗಳನ್ನು ತ್ತರಿಸುತ್ತ ವಾಣಿಜ್ಯ ಶಾಖೆಯ ದ್ವಿತೀಯ ಕಾರ್ಯದರ್ಶಿಗಳಾದ ಶ್ರೀ ಜೆ. ಬಿ. ಮಲ್ಲಾರಾಧ್ಯರು ತಿಳಿಸಿದರು.

ಚೀಫ್ ಸೆಕ್ರೆಟರಿಯವರಾದ ಶ್ರೀ ಎ. ವೇದವ್ಯಾಸಾಚಾರ್ಯರು ಸಾರ್ವಜನಿಕ ಆಡಳಿತದ ೧೭,೨೯,೬೦೦ ರೂಪಾಯಿಗಳ ಬೇಡಿಕೆಯನ್ನು ಜೂನ ೨೬ ರಲ್ಲಿ ಸಭೆಯ ಮುಂದಿಡಲು ಅಂಗೀಕೃತವಾಯಿತು.

ಆ ಮೇಲೆ ಈಸೂರು ಮತ್ತು ಶ್ರವಣ ಬೆಳಗೊಳ ಬಂದಿಗಳ ಪ್ರಶ್ನೆಗೆ ಉತ್ತರವಾಗಿ ಗೃಹಮಂತ್ರಿಗಳಾದ ರಾಜಸೇವಾಪ್ರಸಕ್ತ ಎಂ. ಶೇಷಾದ್ರಿಯವರು ಸರಕಾರದವರು ಅನೇಕ ಬಂದಿಗಳನ್ನು ಈಗಲೇ ಬಿಟ್ಟಿರುವರೆಂದೂ ಹಿಂಸಾತ್ಮಕ ಕೃತ್ಯದಿಂದ ಶಿಕ್ಷೆಪಾತ್ರರಾದವರನ್ನು ಬಿಡುವುದು ಅಶಕ್ಯವೆಂದೂ ಸದಸ್ಯರು ಕೊಟ್ಟಿರುವ ಅಭಿಪ್ರಾಯಗಳನ್ನು ಪರಿಶೀಲಿಸುವದಾಗಿಯೂ ಉತ್ತರ ಕೊಟ್ಟರು.

ಸಂಸ್ಥಾನದಲ್ಲಿ ಮರಣದಂಡನೆಯ ಶಿಕ್ಷೆ ರದ್ದಾಗಬೇಕೆಂದೂ ಪೋಲೀಸರವರ ಮನೋಭಾವ ಬದಲಾಗಬೇಕೆಂದೂ ಜೂನ ೨೭ ರ ಸಭೆಯಲ್ಲಿ ಚರ್ಚೆ ನಡೆಯಿತು. ಸರಕಾರದವರ ಸಹಾನುಭೂತಿಯ ಮೇಲೆ ಸೂಚಕರು ಮೋಶಾನಿರ್ಣಯವನ್ನು ಹಿಂತೆಗೆದುಕೊಂಡರು.

ಪ್ರಶ್ನೋತ್ತರಗಳಾದ ಮೇಲೆ ಶಾಸನ ಸಚಿವರಾದ ಶ್ರೀ ಟಿ. ಎಸ್. ಎನ್. ಶರೀಫರು ೧೩,೯೮,೦೦೦ ರೂಪಾಯಿಗಳ ಬೇಡಿಕೆ ಅಂಗೀಕೃತವಾಯಿತು.

ಬಳಿಕ ವಿದ್ಯಾಮಂತ್ರಿಗಳಾದ ಡಾ. ಟಿ. ಸಿ. ಎಂ. ರಾಯನ್ನರ ವೈದ್ಯಕೀಯ ಶಾಖೆಗೆ ಸಂಬಂಧಿಸಿದ ೩೭,೯೬೦೦೦ ರೂಪಾಯಿಗಳ ಬೇಡಿಕೆಯೂ ಪಾಸಾಯಿತು.

ಯುದ್ಧಾನಂತರದ ಅಭಿವೃದ್ಧಿ ಯೋಜನೆಗಳನ್ನು ಕಾರ್ಯರೂಪಕ್ಕೆ ಬರುವಂತೆ ನೋಡಿಕೊಳ್ಳಲು ಒಂದು ಸಣ್ಣ ಸಮಿತಿಯನ್ನು ನೇಮಕ ಮಾಡಬೇಕೆಂಬ ಮೋಶಾನಿರ್ಣಯವೊಂದು ಜೂನ ೨೮ ರಲ್ಲಿ ಪಾಸಾಯಿತು. ಖಾಸಗಿ ಸದಸ್ಯರಿಗೆ ಈ ಅಧಿವೇಶನದಲ್ಲಿ ದೊರೆತ ಪ್ರಥಮ ವಿಜಯವಿದು.

ವಿದ್ಯಾಭ್ಯಾಸದ ಬಗ್ಗೆ ಡಾ. ಟಿ. ಸಿ. ಎಂ. ರಾಯನ್ನರು ಮುಂದಿಸಿದ ೧,೬೦,೨೭,೦೦೦ ರೂಪಾಯಿಗಳ ಬೇಡಿಕೆಯು ಸ್ವೀಕೃತವಾಯಿತು.

ಜೂನ ೩೦ ಬೇಡಿಕೆಯನ್ನು ಪರಿಶೀಲಿಸುವ ಕೊನೆಯ ದಿನವಾದ್ದರಿಂದ ಉಳಿದ ಬೇಡಿಕೆಗಳಿಗೆ ಮತಗಣನೆಯಿಂದ ಒಪ್ಪಿಗೆ ಪಡೆಯಲಾಯಿತು.

ಜೂನ ೩೦ರಲ್ಲಿ ಗೃಹಮಂತ್ರಿಗಳಾದ ರಾ. ಪ್ರ. ಶ್ರೀ ಎಂ ಶೇಷಾದ್ರಿಯವರು ೪೫-೪೬ ನೆಯ ವರ್ಷದ “ಸಾರ್ವಜನಿಕ ವೆಚ್ಚದ ಸಮಿತಿ”ಯ ವರದಿಯನ್ನು ಸಭೆಯ ಮುಂದಿಡಲು ಅದು ೩ ಗಂಟೆಗಳ ಚರ್ಚೆಯನಂತರ ಅಂಗೀಕೃತವಾಯಿತು.

ಅನಂತರ ೪೫-೪೬ ನೆಯ ಸಾಲಿನ ಹೆಚ್ಚಿನ “ಗ್ರಾಂಟು” ಗಳು ಮತ್ತು ಅದಕ್ಕೆ ಸಂಬಂಧಿಸಿದ ಮೋಶಾಥಿರ್ಣಯಗಳು—ಇವನ್ನು ಪರಿಶೀಲನೆಗೆ ತೆಗೆದು ಕೊಳ್ಳಲಾಯಿತು; ಪರಿಶೀಲನೆಯಾದ ಬಳಿಕ ಅವು ಸ್ವೀಕೃತವಾದವು.

ಜುಲೈ ೧ ರಲ್ಲಿ ಸರಕಾರೀ ಮಸೂದೆಗಳ ಚರ್ಚೆ ನಡೆದಾಗ ಕಾಂಗ್ರೆಸ ಸಭಾಸದರು ಹೊಣೆಗಾರ ರಾಜ್ಯ ಪದ್ಧತಿಯ ಬೇಡಿಕೆಯ ಸಂಬಂಧದಲ್ಲಿ ಮತಪ್ರದರ್ಶಿಸಲು ಸಭಾತ್ಯಾಗಮಾಡಿದರು. ಮತ್ತು ಮದ್ಯಪ್ರತಿಬಂಧ ಧೋರಣದ ಬಗ್ಗೆ ಕಾಂಗ್ರೆಸ್ಸಿಗರು ತಂದಿದ್ದ ನಿಲುವಳಿ ಸೂಚನೆಯು ಚರ್ಚೆಯಲ್ಲಿಯೇ ಮುಕ್ತಾಯವಾಯಿತೆಂದು ತಿಳಿದುಬಂದಿದೆ.

## ಬೆಂಗಳೂರು-ಮೈಸೂರು

ದಿವಾನರಾದ ಸರ್ ಆರ್ಕಾಟ ರಾಮಸ್ವಾಮಿ ಮೊದಲಿಯಾರರು ಜೂನ ೩೦ ರಲ್ಲಿ ಬೆಂಗಳೂರಿನ ಚಾಮರಾಜ ಪೇಟೆಯ ಅನೇಕಲ್ಲು ತಿಮ್ಮಯ್ಯನವರ ಬಲಿಜ ವಿದ್ಯಾರ್ಥಿ ನಿಲಯದ ವಿಸ್ತರಣಗಳ ಶಂಕುಸ್ಥಾಪನೆಯನ್ನು ನೆರವೇರಿಸುತ್ತ ವಿದ್ಯೆಯ ಮಹತ್ವವನ್ನು ವಿವರಿಸಿದರು.

ಡಾ. ರಕ್ಷಮ್ಮ ಬಸಾಕ್ ಮತ್ತು ಶ್ರೀ ಎಚ್. ಎಸ್. ರುದ್ರಪ್ಪನವರು ನ್ಯಾಯವಿಧಾಯಕ ಸಭೆಯಿಂದ ಸಾರ್ವಜನಿಕ ಆರೋಗ್ಯ ಸಂಸ್ಥೆಗೆ ಆರಿಸಲ್ಪಟ್ಟಿದ್ದಾರೆ.

ಸಂಸ್ಥಾನದಲ್ಲಿ “ ಶಾಪ್ ಅಸಿಸ್ಟೆಂಟ ” ಕಾಯಿದೆಯನ್ನು ಕೂಡಲೆ ಜಾರಿಗೆ ತರಬೇಕೆಂದು ಘೋಷಿಸುತ್ತ ಹೊಟೇಲು ಕೆಲಸಗಾರರ ಸಂಘದ ಸುಮಾರು ನೂರು ಜನರು ಜೂಲೈ ೧ ರಲ್ಲಿ ನ್ಯಾಯ ವಿಧಾಯಕ ಸಭೆಯಮುಂದೆ ಪ್ರದರ್ಶನ ನಡೆಸಿದರು.

ಶಿಸ್ತಿನ ಕ್ರಮದ ಶಿಕ್ಷೆಗೆ ಗುರಿಯಾದ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಪರವಾಗಿ ಬೆಂಬಲಕೊಡುತ್ತೇನೆಂದೂ ವಿದ್ಯಾರ್ಥಿಗಳ ಹಕ್ಕುಬಾಧ್ಯತೆಗಳಿಗೆ ಧಕ್ಕೆ ಬರಕೂಡದೆಂದೂ “ ಇಂಡಿಯಾ ಕಮ್ಯುನಿಸ್ಟ ” ಪಕ್ಷದ ಬೆಂಗಳೂರು ಶಾಖೆಯು ತಿಳಿಸಿದೆ.

ಮೈಸೂರು ಸಂಸ್ಥಾನದಿಂದ ಘಟನಾ ಸಮಿತಿಗೆ ಹೋಗುವ ಪ್ರತಿನಿಧಿಗಳಲ್ಲಿ ಶಾಸನ ಸಭೆಗಳ ಹೊರಗಿರುವವರನ್ನೂ ಆರಿಸಿಕೊಳ್ಳಲು ಅವಕಾಶ ವಿರಬೇಕೆಂದು ಶ್ರೀ ಕೆ. ಟಿ. ಭಾಷ್ಯಂರವರು ಹೇಳಿಕೆಕೊಟ್ಟಿದ್ದಾರೆ

ಬಡ ಒಕ್ಕಲಿಗ ವಿದ್ಯಾರ್ಥಿಗಳಿಗೆ ಉಚಿತ ಭೋಜನವಸತಿಗಳನ್ನೇರ್ಪಡಿಸಲು ಬೆಂಗಳೂರಿನ ಒಕ್ಕಲಿಗರ ಸಂಘದ ಆಶ್ರಯದಲ್ಲಿ ಅನಾಥಾಲಯವೊಂದನ್ನು ಈ ವರ್ಷ ಪ್ರಾರಂಭಿಸಲಾಗುವುದೆಂದು ತಿಳಿಸಲಾಗಿದೆ.

ಶ್ರೀ ಆರ್. ರಾಮಚಂದ್ರರಾವ್ ಬೊಂಭೋರೆಯವರ ಅಧ್ಯಕ್ಷತೆಯಲ್ಲಿ ಮೈಸೂರುನಗರದ ಆಹಾರ ಸಮಿತಿಯ ಸಭೆ ನಡೆದು ಆಹಾರ ಪೂರೈಕೆಗೆ ಸಂಬಂಧಿಸಿದ ನಾನಾ ಅಂಶಗಳನ್ನು ಪರಿಶೀಲಿಸಲಾಯಿತು.

ಬರ್ಮಾದಿಂದ ಬಂದ ಹಲವು ಜಾತಿಯ “ ಬೀನ್ಸ್ ” ಧಾನ್ಯದ ಉಪಯೋಗದಿಂದ ದೇಹಕ್ಕೆ ಹಾನಿಕರವಾದ ವಿಷ ಪರಿಣಾಮಗಳುಂಟಾಗಿವೆಯೆಂದು ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ಸರಕಾರದಗಮನಕ್ಕೆ ಬಂದಿದೆಯೆಂದೂ ಆ ಧಾನ್ಯವು ಮದ್ರಾಸಿನಿಂದ ನಾನಾ ಪ್ರದೇಶಗಳಿಗೆ ಹಂಚಲಾಗಿದೆಯೆಂದೂ ಅಂತಹ ಧಾನ್ಯವನ್ನು ಮಾರುವವರು ಅದನ್ನು ಸರಕಾರದ ಅಜ್ಞೆಯ ವಿನಾ ಯಾರಿಗೂ ವ್ಯಾಪಾರ ಮಾಡಕೂಡದೆಂದೂ ಮೈಸೂರು ಸರಕಾರ ಪ್ರಕಟಿಸಿದೆ.




### ಮುಂಬಯಿ ಶೇರ ಪೇಟೆ

ಮುಂಬಯಿ ಶೇರ ಪೇಟೆಯಲ್ಲಿ ಟಾಟಾ ಪಾಲುಗಳ ಬೆಲೆ ಅನೇಕ ದಿನಗಳಿಂದ ಶಿಥಿಲವಾಗಿದೆ. ಜಮಶೇದಪುರ ಉಕ್ಕಿನ ಕಾರಖಾನೆಯ ಕೂಲಿಕಾರ ಪರಿಸ್ಥಿತಿಯ ಬಗ್ಗೆ ಸಂಶಯಕರ ಸುದ್ದಿಗಳು ಬರುತ್ತಿದ್ದುದೆ ಇದಕ್ಕೆ ಕಾರಣವಾಗಿದೆ ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೧೯೯೩-೮-೦ ರಿಂದ ೧೯೮೦-೦-೦ ಕ್ಕಿಳಿದು ಶಿಥಿಲಾವಸ್ಥೆಯಲ್ಲಿಯೇ ಇದ್ದರೂ ಇಂದು ತಿರುಗಿ ೨೦೨೨-೮-೦ ಕ್ಕೇರಿತು. ಸರಕಾರದವರು ಉಕ್ಕಿನ ಬೆಲೆ ಏರಿಸುವರೆಂಬ ನಂಬಿಕೆಯೂ ಇದಕ್ಕೆ ಕಾರಣವಾಗಿರಬಹುದು. ಗಿರಣಿ ಪಾಲುಗಳು ತುಸು ಸುಸ್ಥಿತಿಯಲ್ಲಿದ್ದರೂ ಕೊನೆಯದಿನ ಅವು ಬೆಂಬಲಿ ಕಳೆದುಕೊಂಡವು. ಗಿರಣಿ ಬಟ್ಟೆಗಳ ಮೇಲಿನ ನಿಯಂತ್ರಣ ಹೋಗುವದೆಂಬ ಆಶೆ ಬೇಗನೆ ಫಲಿಸುವ ಆಶೆ ಕಾಣುವದಿಲ್ಲ. ಮುಂಬಯಿ ಡಾಯಿಂಗ ೧೧೦೨-೮-೦ ಯಿಂದ ೧೧೪೦-೦-೦ಕ್ಕೇರಿ ೧೧೨೦-೦-೦ಕ್ಕಿಳಿಯಿತು. ಫಿನ್ಲೆ ೩೧೦-೦-೦ರಿಂದ ೩೨೪-೦-೦ಕ್ಕೇರಿ ೩೨೨—೦—೦ ಕ್ಕೂ ಕೋಹಿನೂರು ೬೫೭-೦-೦ರಿಂದ ೬೫೯-೦-೦ಕ್ಕೇರಿ ೬೫೮-೦-೦ಕ್ಕೂ ಸ್ವದೇಶಿ ೬೫೩-೦-೦ ರಿಂದ ೬೫೮-೦-೦ ಕ್ಕೇರಿ ೬೫೧-೦-೦ ಕ್ಕೂ ಗೋಕಾಕ ೩೧೦-೦-೦ ರಿಂದ ೩೪೯-೦-೦ ಕ್ಕೇರಿ ೩೩೯—೦—೦ಕ್ಕೂ ಮರಳಿದವು. ಇಂಡಿಯನ್ ಅಯರ್ನ ೨೬೯-೧-೦ ರಿಂದ ೨೭೫—೦—೦ಕ್ಕೇರಿ ೨೭೪-೦-೦ಕ್ಕಿಳಿದರೆ ಅಸೋಸಿಯೇಟೆಡ್ ಸಿಮೆಂಟ್ಸ ೧೬೯-೮-೦ ರಿಂದ ೧೭೦—೮—೦ ಕ್ಕೇರಿದೆ. ಬ್ಯಾಂಕುಗಳಲ್ಲಿ ಸೆಂಟ್ರಲ ೯೫—೮—೦ ರಿಂದ ೯೭—೦—೦ಕ್ಕೆ ಸುಧಾರಿಸಿತು. ಇಂಪೀರಿಯಲ್ ಎಸ್. ಸಿ ೨೨೨೦-೦-೦ರಿಂದ ೨೨೪೦-೦-೦ ಕ್ಕೇರಿತು ರಿಜರ್ವ ೧೧೮-೮-೦ ರಿಂದ ೧೨೦-೦-೦ಕ್ಕೆ ಸುಧಾರಿಸಿತು. ೧೯೪೭ ರ ಸರಕಾರಿ ಸಾಲ ೧೦೦-೧೨-೦ ಯಲ್ಲಿ ಯಥಾಸ್ಥಿತಿ.

### ಚಿನ್ನ—ಬೆಳ್ಳಿ

ಪೇಟೆಯಲ್ಲಿ ಚಿನ್ನ ಬೆಳ್ಳಿ ಅಭಾವದಿಂದ ಬೆಲೆಗಳು ತಗ್ಗಲು ಅವಕಾಶವಿಲ್ಲದಾಗಿದೆ. ಹೊರಗಿನಿಂದ ತರಿಸದಂತೆ ತೀಕ್ಷ್ಣ ನಿರ್ಬಂಧವಿದೆ ಅದರೂ ಅಂತರ್‌ರಾಷ್ಟ್ರೀಯ ಪೇಟೆಯಲ್ಲಿ ಚಿನ್ನದ ಬೆಲೆ ಇಳಿದದ್ದರಿಂದ ಈ ವಾರ ತುಸು ಬೆಲೆ ಇಳಿಯಿತು. ಕಳೆದವಾರ ೧೧೭-೮-೦ವರೆಗೆ ಹೋಗಿದ್ದ ಚಿನ್ನ ೧೧೨-೬-೦ಕ್ಕಿಳಿಯಿತು. ವಾಯದಾ ೧೧೨-೨-೦, ೧೮೦-೦-೦ ವರೆಗೇರಿದ್ದ ಬೆಳ್ಳಿ ೧೭೧-೪—೦ ಕ್ಕೆ ಬಂದು ತಿರುಗಿ ಸ್ವಲ್ಪ ಏರಿ ೧೭೧-೧೨-೦ ಕ್ಕೆ ಮರಳಿದೆ. ವಾಯಿದಾ ೧೭೧-೧೨-೦

### ಅರಳೆ

ಈ ವರ್ಷದ ಅರಳೆ ಪೀಕು ೩೫,೧೫೦೦೦ ಗಂಟುಗಳಷ್ಟಾಗಿದೆಯೆಂದು ಸರಕಾರ ಪ್ರಕಟಿಸಿದೆ. ಇದು ಕಳೆದ ವರ್ಷಕ್ಕಿಂತ ನೂರಕ್ಕೆ ೩ರಷ್ಟು ಹೆಚ್ಚಾಗಿದೆ. ಅದರೂ ಗಿರಾಕಿ ಇರುವದರಿಂದ ಬೆಲೆ ಸುಧಾರಿಸಬೇಕಾಗಿತ್ತು. ನಿರ್ಯಾತ ಸೌಕರ್ಯ ಸಿಗದಿರುವದರಿಂದಲೂ ಜಪಾನಕ್ಕೆ ಬೇಕಾಗುವ ಅರಳೆಯಲ್ಲಿ ನೂರಕ್ಕೆ ೭೦ರಷ್ಟು ವ್ಯಾಪಾರವನ್ನು ಅಮೇರಿಕನ್ ವ್ಯಾಪಾರಿಗಳು ಹೊಡೆದುಬಿಟ್ಟಿರುವದರಿಂದಲೂ ಬೆಲೆಗಳು ಏರಲೊಲ್ಲವು ಯುದ್ಧಕ್ಕೆ ಮೊದಲು ನೂರಕ್ಕೆ ೪೦ರಷ್ಟು ಅರಳೆ ಹಿಂದುಸ್ತಾನದಿಂದ ಜಪಾನಕ್ಕೆ ಹೋಗುತಿತ್ತು ಆದರೆ ಜಪಾನದಲ್ಲಿರುವ ತಮ್ಮ ಮಿಲಿಟರಿ ಅಧಿಕಾರಿಗಳ ಬೆಂಬಲದಿಂದ ಅಮೇರಿಕನ್ನರು ನಮ್ಮ ಪಾಲನ್ನು ನೂರಕ್ಕೆ ೨೭ರಷ್ಟಕ್ಕಿಳಿಸಿ ತಮ್ಮಪಾಲು ಹೆಚ್ಚಿಸಿಕೊಂಡಿದ್ದಾರೆ. ಸೆಪ್ಟೆಂಬರ ವಾಯಿದೆ ೪೫೩-೮-೦ ರಿಂದ ೪೪೮—೧೪—೦ಕ್ಕಿಳಿದು ೪೫೩-೧೪-೦ಕ್ಕೆ ಸುಧಾರಿಸಿದೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೬೪-೦-೦ |
| ಅಗಸಿ | ೨೯-೦-೦ |
| ಅಗಸಿ ಎಣ್ಣೆ | ೨೦-೦-೦ |

### ಸಾಂಗಲಿ ಪೇಟೆ

| | |
|---|---|
| ಅರಿಷಣ ಹೇರು | ೧೦೦-೧೦೬ |
| ಮೆಣಸಿನಕಾಯಿ ಹೇರು ,, | ೯೦-೧೭೫ |
| ಶೇಂಗಾ ಖಂಡಿ | ೧೩೫ |

### ಹುಬ್ಬಳ್ಳಿ

| | | |
|---|---|---|
| ಹೊಸ ಜಯವಂತ ಹತ್ತಿ | ನಂ. ೧ | ೨೭೫-೨೮೨ |
| ” | ನಂ. ೨ | ೨೫೦-೨೬೦ |
| ” | ನಂ. ೩ | ೨೩೦-೨೪೫ |
| ಹಳೇ ಜಯವಂತ ಹತ್ತಿ | | ೨೮೫-೨೯೦ |
| ಜಿನ ಹೊಸದು | | ೧೭೫-೧೮೨ |
| ಜಿನ ಹಳೇದು | | ೧೯೦-೧೯೨ |
| ಡಬಲರೋಲ | | ೧೮೦-೧೮೫ |
| ಸಾಜಿನ | | ೧೭೦-೧೮೦ |

## ದಕ್ಷಿಣ ಕನ್ನಡ

ಮಂಗಳೂರಿನ ಶ್ರೀ ರಾಮಕೃಷ್ಣ ಮಠದ ಅಧ್ಯಕ್ಷರಾದ ವಿಮಲಾನಂದ ಸ್ವಾಮಿಗಳು ಜೂನ ೨೬ ರಲ್ಲಿ ಬೆಸೆಂಟ್ ಬಾಲಿಕಾ ಪಾಠಶಾಲೆಯಲ್ಲಿ ನಮ್ಮ ರಾಷ್ಟ್ರೀಯ ಸಂಸ್ಕೃತಿ ಎಂಬ ವಿಚಾರವಾಗಿ ಭಾಷಣ ಮಾಡಿದರು.

ಜೂನ ೨೬ ರ ದಿನ ಮಂಗಳೂರಿನ “ ಥಿಯಾಸಫಿಕಲ್ ” ಭವನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಶಿಕ್ಷಕ ಸಂಘದ ಕೌನ್ಸಿಲ್ಲಿನ ಸಭೆಯು ಶ್ರೀ ಎಂ. ಏಕಾಂಬರರಾಯರ ಅಧ್ಯಕ್ಷತೆಯಲ್ಲಿ ಜರುಗಿದಾಗ ಕಾರ್ಯ ಸಮಿತಿಗೆ ಕಳುಹಬೇಕಾದ ವಂತಿಗೆಯ ನಿರ್ಣಯ ಮತ್ತು ಪ್ರತಿನಿಧಿಗಳ ಆಯ್ಕೆ ನಡೆದವು.

ಮಂಗಳೂರಿನ ಹರಿದಾಸ ಗಲ್ಲಿಯಲ್ಲಿಯ ಒಂದು ಮನೆಯಲ್ಲಿ ವೆಂಕಪ್ಪ ಎಂಬ ಚಿಲ್ಲರೆ ವ್ಯಾಪಾರಿಯೊಬ್ಬರು ನೇಣು ಹಾಕಿಕೊಂಡು ಮೃತಪಟ್ಟದ್ದನ್ನು ಕಂಡು ಅಧಿಕಾರಿಗಳು ಪರೀಕ್ಷೆಗಾಗಿ ಹೆಣವನ್ನು ಆಸ್ಪತ್ರೆಗೊಯ್ದರು.

ಕಳೆದ ಮಾರ್ಚ ತಿಂಗಳಲ್ಲಿ ದ. ಕ. ಜಿಲ್ಲೆಯಿಂದ ೧೬೪೭ ವಿದ್ಯಾರ್ಥಿವಳು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಕುಳಿತಿದ್ದು ಅವರಲ್ಲಿ ೧೧೦೮ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ.

ಮಂಗಳೂರಿನ ವಿಠೋಬ ದೇವಸ್ಥಾನ ರಸ್ತೆಯ ಪೂರ್ವಕ್ಕಿರುವ ಒಂದು ಮನೆಯ ಮಾಡಿಗೆ ಜೂನ ೨೬ ರ ರಾತ್ರಿ ಬೆಂಕಿಹಿಡಿದಾಗ ಅಗ್ನಿಶಾಮಕ ದಳದವರ ಮತ್ತು ಇತರರ ಸಹಾಯದಿಂದ ಅನಾಹುತವನ್ನು ತಪ್ಪಿಸಲಾಯಿತು.

ಕಾಸರಗೋಡು ತಾಲೂಕು ಟಪಾಲುಕಟ್ಟೆಯಲ್ಲಿ ಟಪಾಲು ಪೇದೆಗಳ ಸಂಘದ ಸಭೆಯು ಜೂನ ೧೫ ರಲ್ಲಿ ಸೇರಿ ಕೆಲವೊಂದು ಸುಖಕಷ್ಟಗಳ ವಿಚಾರದಲ್ಲಿ ಮಾಡಬೇಕಾದ ಕರ್ತವ್ಯಗಳಾವುವೆಂದು ನಿರ್ಧರಿಸಲಾಯಿತು.

ಮಂಗಳೂರಿನ ಹಂಪನಕಟ್ಟೆಯ “ ಜೊಯಿಂಟ ಬುಕಿಂಗ ಅಫೀಸ ” ನ ಗುಮಾಸ್ತರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಡೆಗೆ ಒಂದು ಮನವಿ ಕಳುಹಿಸಿದ್ದು ಸರಕಾರಿ ನೌಕರರಿಂದ ತಮ್ಮ ಕೆಲಸಕ್ಕೆ ಆಗುವ ಅಡಚಣೆ ಹಾಗೂ ನಾಗರಿಕ ಪ್ರವಾಸಿಕರ ಪ್ರಯಾಣಕ್ಕೆ ಆಗುವ ತೊಡಕು—ಇವುಗಳನ್ನು ನಿವೇದಿಸಿದ್ದಾರೆಂದು ತಿಳಿದುಬಂದಿದೆ.

